# ಮೊದಲ ಮಾತುಗಳು.

ಈ 'ಶಿವಾನುಭಾವ ದೀಪಿಕೆ' ಎಂಬ ಗ್ರಂಥವು ಎರಡು ಬರಹದ ಪ್ರತಿಗಳ ಆಧಾರದಿಂದ ಮುದ್ರಿಸಲ್ಪಟ್ಟಿದೆ. ಒಂದು ಮ. ರಾ. ಅಂಕಲಕೋಟಿ ಬಸಪ್ಪನವರದು ಇನ್ನೊಂದು ಸೊರಬದ ತಾಲ್ಲೂಕು ಜಡೆಯ ಸಂಸ್ಥಾನ ಮಠದ ಮಹಾಸ್ವಾಮಿಗಳವರು ಕೊಟ್ಟುದು. ಇದನ್ನು ರಚಿಸಿದವರು ಗ್ರಂಥದ ಕೊನೆಯಲ್ಲಿ 'ಗುರು ಚನ್ನವೀರಾ' ಎಂಬ ಅಂಕಿತವಿರುವುದರಿಂದ ಹರಪನಹಳ್ಳಿ ತಾಲ್ಲೂಕು ಲಿಂಗನಾಯಕನಹಳ್ಳಿಯಲ್ಲಿ ಇದ್ದ ಪ್ರಸಿದ್ಧರೂ ಮಹಿಮರೂ ಕೇವಲ ವೈರಾಗ್ಯವೇ ಮೂರ್ತಿಗೊಂಡಂತೆ ಇದ್ದವರೂ ಆದ ನಿರಂಜನವರ್ಯ ಚನ್ನವೀರಸ್ವಾಮಿಗಳವರ ಶಿಷ್ಯರೊಬ್ಬರು ಎಂದು ಗೊತ್ತಾಗುತ್ತದೆ. ಸದರೀ ಸ್ವಾಮಿಗಳವರಲ್ಲಿ ಶಿಷ್ಯರಾಗಿ ಪ್ರಸಿದ್ಧ ಶರಣರಾದ ಮೈಲಾರದ ಬಸವಪ್ಪನವರು ಬನ್ನಿಮಟ್ಟಿ ಚನ್ನಪ್ಪನವರು ಎಂಬಿಬ್ಬರು ಇದ್ದರೆಂತಲೂ ಇವರಲ್ಲಿ ಚನ್ನಪ್ಪನವರೇ ಇದನ್ನು ರಚಿಸಿರಬಹುದೆಂತಲೂ ಕೆಲವರು ಪೂರ್ವಿಕರು ಹೇಳುತ್ತಾರೆ. ಆದರೆ ಬರಹದ ಪ್ರತಿಯೊಂದರಲ್ಲಿ 'ಮೈಲಾರದ ಬಸವಪ್ಪನವರು ವಿರಚಿಸಿದ ಷಟ್‌ಸ್ಥಲ ಜ್ಞಾನಾನುಭಾವ' ಎಂದಿದೆ.

ಇದರಲ್ಲಿನ ವಿಷಯಗಳು ಕೇವಲ ಮುಗ್ಧಭಾವದಿಂದ ವೀರಶೈವ ಮತದ ವಿಷಯವಾಗಿ ಹೇಳಲ್ಪಟ್ಟವುಗಳೆಂದು ಕಂಡರೂ ಸರ್ವ ಜನರಿಗೂ ತಿಳಿವಳಿಕೆಯನ್ನು ಹೆಚ್ಚಿಸುವ ವಿಷಯಗಳೂ ಇದರಲ್ಲಿ ಅಡಕವಾಗಿರುತ್ತವೆ.

ಕಣ್ಣುಗಳ ಜ್ಯೋತಿಯಲ್ಲಿಯೇ ಲಿಂಗವಿರುವುದೆಂದೂ ಇದನ್ನು ತಿಳಿಯದೆ ಸ್ಥಾವರ ಮೂರ್ತಿಗಳ ಪೂಜೆ ಮಾಡಬಾರದೆಂದೂ ಹೇಳುವುದು (ಪದ್ಯ ೨೫)

ತನಗಿಂತ ಭಿನ್ನನಾಗಿ ದೇವನಿದ್ದಾನೆಂದು ಆ ಸಂಬಂಧದ ಶಾಸ್ತ್ರಗಳನ್ನು ನಿಜವೆಂದು ಓದಿ ನಡೆಯಬಾರದೆಂದೂ ತನ್ನ ನಿಜವನ್ನು ತಿಳಿಯಬೇಕೆಂದೂ ಹೇಳುವುದು (ಪದ್ಯ ೧೮೧)

ಬಾಲತನದಲ್ಲಿ ಆಟ, ಯೌವನದಲ್ಲಿ ಕಾಮವಿಕಾರ ಮುದುಕನಾದಾಗ ಕೋಲೂರಿಕೊಂಡು ನಡೆವುದು ಹೀಗಾದರೆ ಅನುಭಾವದ ಕಾಲವು ಯಾವಾಗ ಎಂದು ಕೇಳುವುದು (ಪದ್ಯ ೧೪೩)

'ಭಕ್ತನ ಹೃನ್ನಡುಗಣ್ಣಿನೊಳು ಶಿವ ವ್ಯಕ್ತಂ' ಎನ್ನುವುದು (ಪದ್ಯ ೨೦೫)

ಬಯಸಿ ಪಡೆವುದು ಅಂಗ ಭೋಗ, ಬಯಸದೆ ಬಂದುದು ಲಿಂಗ ಭೋಗ (ಮಹಾದೇವನ ಸುಖ) ಎನ್ನುವುದು (ಪದ್ಯ ೬೩) ಈ ವಿಷಯಗಳು ಸರ್ವರಿಗೂ ಆಧ್ಯಾತ್ಮಿಕ ಉನ್ನತಿಗೆ ಹೆಚ್ಚಿನ ಸಹಾಯವನ್ನು ಮಾಡುವುದಿಲ್ಲವೇ ?

೨೮೩ ನೆಯ ಪದ್ಯದಲ್ಲಿ ಹೇಳಲ್ಪಟ್ಟಂತೆ ತನಗೆ ಅದು ಬೇಕು ಇದು ಬೇಕು ಎಂಬುದು ದೇಹದ ಗುಣ, ತನುವಿಗೆ ಸುಖಬೇಡ ಒಳ್ಳೆಯ ಊಟ ಬೇಡ, ಸಂಸಾರ ಬೇಡ ಎಂಬುದು ವೈರಾಗ್ಯ, ಹೀಗೆಬೇಕೆಂಬ ಜೀವ ಭಾವವನ್ನೂ ಬೇಡವೆಂಬ ವಿರಕ್ತಿಯನ್ನೂ ಎರಡನ್ನೂ ಬಿಟ್ಟು ಮಹಾದೇವನ ಕೃಪೆಯಿಂದ ಬಂದುದನ್ನೇ ಅನುಭವಿಸು, ಎಂದರೆ ಧಾರ್ಮಿಕ ಭಾವನೆಯಿಂದ ಸುಮ್ಮನೆ ಕೂಡದೆ ಮಹಾದೇವನ ಅನುಭಾವಕ್ಕಾಗಿ ಅರ್ಪಣಕ್ಕಾಗಿ ಕಾರ್ಯವನ್ನು ಮಾಡುವೆನೆಂದು ಮಾಡಿ ಬಂದ ಫಲವನ್ನು ಅನುಭೋಗಿಸೆಂದು ಹೇಳುವುದು ಜಗತ್ತನ್ನೇ ಶಾಂತಿಯಲ್ಲಿ ಇರಿಸುವ ಲಕ್ಷಣವು. ಇದೊಂದು ಪದ್ಯದಂತೆ ನಡೆದರೆ ಸರ್ವರೂ ಮಹಿಮಾವಂತರಾಗುವುದರಲ್ಲಿ ಅನುಮಾನವೇ ಇಲ್ಲ.

ಈ ಮುದ್ರಣ ಗ್ರಂಥದಲ್ಲಿ ೨೦೫ ನೆಯ ಪದ್ಯದ ಟಿಪ್ಪಣಿಯಲ್ಲಿ ಶಿವಭಕ್ತರಾದವರು ಲೀಲೆಗಾಗಿ ಕ್ಷೇತ್ರ ಯಾತ್ರೆಯನ್ನು ಮಾಡಬಹುದು ಎಂದು ಬರೆದಿದೆ ಇಲ್ಲಿ ಲೀಲೆ ಎಂದರೆ ಆನಂದಾರ್ಥ ಎಂಬ ಅಭಿಪ್ರಾಯವಿದೆ. ಈ 'ಲೀಲೆಗಾಗಿ' ಎಂಬ ಪದವಿಲ್ಲದಿದ್ದರೂ ಮೇಲಿನ ಪದ್ಯದ ತಾತ್ಪರ್ಯವು ಟಿಪ್ಪಣಿಯಲ್ಲಿ ಬರುತ್ತದೆ.

೫೪, ೫೯ ಮತ್ತು ೧೨೨ ನೆಯ ಪದ್ಯಗಳಲ್ಲಿ ಶಿವನಿಂದ ಪಂಚ ಕೃತ್ಯಾಧೀಶ್ವರರು ಉತ್ಪತ್ತಿಯಾದರೆಂಬ ಅಭಿಪ್ರಾಯವಿದೆ. ಈ ವಿಷಯವು ಪೂರ್ವಿಕರು ಒಪ್ಪಿದ ಧಾರ್ಮಿಕಾಭಿಪ್ರಾಯವೆಂಬುದಕ್ಕೆ ವ್ಯಾಸ ಋಷಿ ರಚಿತವಾದ ಪುರಾಣಗಳಲ್ಲಿ ಅನೇಕ ಕಡೆಗಳಲ್ಲಿ ಉಲ್ಲೇಖವಿದೆ. 'ಲಿಂಗ ಪುರಾಣ ಉತ್ತರಭಾಗ ಅಧ್ಯಾಯ ೨೧ ಶ್ಲೋಕ ೧೫' (ಮುಂಬಯಿಯಲ್ಲಿ ಮುದ್ರಣವಾಗಿರುವುದು

ಶಿವಂ ಸದಾಶಿವಂ ದೇವಂ ಮಹೇಶ್ವರ ಮತಃ ಪರಂ
ರುದ್ರಂ ವಿಷ್ಣುಂ ವಿರಂಚಿಂ ಚ ಸೃಷ್ಟಿ ನ್ಯಾಯೇನ ಭಾವಯೇತ್

(ತಾತ್ಪರ್ಯ :— ಶಿವ, ಸದಾಶಿವ, ಮಹೇಶ್ವರ ಅಪರಾದ ಮೇಲೆ ರುದ್ರ, ವಿಷ್ಣು, ಬ್ರಹ್ಮ ಇವರನ್ನು ಸೃಷ್ಟಿ ನ್ಯಾಯ ಎಂದರೆ ಒಬ್ಬರಿಂದೊಬ್ಬರ ಉತ್ಪತ್ತಿ ಎಂಬುದಾಗಿ ತಿಳಿಯಬೇಕು.) ಎಂಬುದಿದೆ. ಇದಲ್ಲದೆ ಇದೇ ಉತ್ತರ ಭಾಗದ ೧೬ನೆಯ ಅಧ್ಯಾಯದಲ್ಲಿ

ಸದಾಶಿವೇಶ್ವರಾದ್ಯಾನಿ ತತ್ತ್ವಾನಿ ಶಿವ ತತ್ತ್ವತಃ
ಜಾತಾನಿ ನ ತದನ್ಯಾನಿ ಮೃದ್ ದ್ರವ್ಯಂ ಕುಂಭ ಭೇದವತ್

( ತಾತ್ಪರ್ಯ:— ಸದಾಶಿವ ಈಶ್ವರ ಮೊದಲಾದ ತತ್ತ್ವಗಳು ಶಿವತತ್ತ್ವದಿಂದ ಹುಟ್ಟಿದವುಗಳು ಇವು ಬೇರೆ ಅಲ್ಲ. ಮಣ್ಣಿನಿಂದ ನಾನಾ ಬಗೆಯ ಕುಂಭಗಳನ್ನು ಮಾಡಿದ ಹಾಗೆ. ) ಎಂಬ ಶ್ಲೋಕವಿದೆ.

ಈ ಉದಾಹರಣೆಗಳಿಂದ ಶಿವನಿಂದ ಸದಾಶಿವ, ಈಶ್ವರ ಅಥವಾ ಮಹೇಶ್ವರ, ರುದ್ರ, ವಿಷ್ಣು, ಬ್ರಹ್ಮರು ಕ್ರಮವಾಗಿ ಉತ್ಪತ್ತಿಯಾದುದು ಸೃಷ್ಟಿ ನ್ಯಾಯ ಎಂಬುವುದೂ ಇವುಗಳೇ ತತ್ತ್ವಗಳು ಎಂದರೆ ಆತ್ಮ, ಆಕಾಶ, ವಾಯು, ಅಗ್ನಿ, ಜಲ, ಭೂಮಿ ಇವುಗಳ ಅಧಿದೇವತಾತ್ಮಕಗಳು ಎಂಬುವುದೂ ಸ್ಪಷ್ಟವಾಗುತ್ತದೆ.

ಶಾಸ್ತ್ರವನ್ನು ಓದಿ ಪರಬ್ರಹ್ಮನನ್ನು ತಿಳಿದರೂ ಆ ಪರಬ್ರಹ್ಮನ ನೆಲೆಯು ಸಿಕ್ಕುವುದಿಲ್ಲ. ಅವನು ನಿರಾಕಾರನಾಗಿದ್ದಾನೆ ಎಂದು ಶಾಸ್ತ್ರದಲ್ಲಿ ಓದಿ ತಿಳಿಯಬಹುದು. ಆ ಮೇಲೆ ಅಂತಹ ನಿರಾಕಾರ ವಸ್ತುವನ್ನು ನೋಡಲಿಕ್ಕಾಗುವುದಿಲ್ಲವೆಂದು ಹೇಳುತ್ತಾ ಸುಮ್ಮನೆ ಕೂಡಬೇಕಾಗುತ್ತದೆ. ಆ ಶಾಸ್ತ್ರದ ತಿಳಿವಳಿಕೆಯನ್ನೇ ನಡೆವಳಿಕೆಯಲ್ಲಿ ತರುವುದಾದರೆ ಆಗ ಶಾಸ್ತ್ರದಿಂದಾಗುವ ಪ್ರಯೋಜನಕ್ಕಿಂತಲೂ ನಡತೆಯಿಂದಾಗುವ ಪ್ರಯೋಜನವೇ ಹೆಚ್ಚು. ಹೀಗೆಯೇ ಶಿವಶರಣರು ತಿಳಿಯುತ್ತಾರೆ. ಅದ್ವೈತಿ (ವೇದಾಂತಿ) ಗಳು ಮಾತಿನಲ್ಲಿ ಬ್ರಹ್ಮವನ್ನು ವಿವರಿಸುವಲ್ಲಿ ಗಟ್ಟಿಗರು. ಶಿವಾದ್ವೈತಿ (ಲಿಂಗಿ) ಗಳು ಕೃತಿಯಲ್ಲಿ ಬ್ರಹ್ಮನನ್ನು ಸಂಪಾದಿಸುವಲ್ಲಿ ಗಟ್ಟಿಗರು. ಈ ಅರ್ಥವನ್ನು ವಿವರಿಸುವ ಒಂದು ಪದ್ಯವೂ ಇದರಲ್ಲಿ ಇದೆ. (೧೬೯ನೆಯ ಪದ್ಯನೋಡಿರಿ.) ಹಸ್ತ ಮತ್ತು ತಲೆ

ಇವೆರಡರ ಸಂಯೋಗದಿಂದ ಶ್ರೇಷ್ಠವಾದ ಯಾಜ್ಞಿಕ (ಇಷ್ಟ ಎಂಬ ಪದವು ಯಜ್ ಧಾತುವಿನಿಂದ ಹುಟ್ಟಿದುದು) ಲಿಂಗವು ಹುಟ್ಟಿ ಅದು ಸರ್ವಾಂಗದಲ್ಲಿಯೂ ಪರಿಪೂರ್ಣವಾಗುತ್ತದೆ. ಈ ಭೇದವನ್ನು ಶಾಸ್ತ್ರಗಳು ತಿಳಿಯವು, ಎಂಬುದೇ ಈ ಪದ್ಯದ ಭಾವಾರ್ಥವು. ಗುರುವು ತನ್ನ ಹಸ್ತವನ್ನು ಶಿಷ್ಯನ ಮಸ್ತಕದ ಮೇಲಿಡಲು ನಿರಾಕಾರ ಪರಬ್ರಹ್ಮವು ಅವನ ಸರ್ವಾಂಗದಲ್ಲಿಯೂ ವ್ಯಾಪಿಸುತ್ತದೆ. ಎಂದರೆ ಗುರುವಿನಲ್ಲಿರುವ ಶಿವೋಹಂ ಭಾವನಾ ಜ್ಞಾನವೆಂಬ ಮಿಂಚು (ವಿದ್ಯುತ್ತು) ಶಿಷ್ಯನ ಮಸ್ತಕಕ್ಕೆ ವ್ಯಾಪಿಸಿ ಆ ಮೂಲಕ ಶಿಷ್ಯನಿಗೆ 'ಶಿವೋಹಂ' ಭಾವನೆಯು ಪ್ರಾಪ್ತವಾಗುವುದು. ಎಷ್ಟು ಶಾಸ್ತ್ರಗಳನ್ನೋದಿ 'ಸೋಹಂ' 'ಶಿವೋಹಂ' ಎಂದು ಅವನು ಹೇಳಿದರೂ ಮೇಲಿನ ತೆರದ ಯೋಗವು ಘಟಿಸುವುದಿಲ್ಲ. ಆದುದರಿಂದ ಲಿಂಗ (ಬ್ರಹ್ಮ) ಧಾರಣೆಯು ಯೋಗವೆಂಬ ಶಿವಯೋಗವು ಈ ವಿಧವಾಗಿ ನಡತೆಯಲ್ಲಿ ತೋರಿದಂತೆ ಬರಿಯ ಮಾತಿನಲ್ಲಿ ತೋರುವುದಿಲ್ಲ. ಆದುದರಿಂದ ನುಡಿಯಲ್ಲಿ ಧೀರರಾಗುವುದಕ್ಕಿಂತ ನಡೆಯಲ್ಲಿ ಧೀರರಾಗಬೇಕೆಂದೇ ಇಲ್ಲಿ ಬೋಧಿಸಲ್ಪಟ್ಟಿದೆ. ಯೋಚಿಸುತ್ತಾ ಹೋದರೆ ಇಂತಹ ಅನೇಕ ಮಹತ್ವದ ವಿಷಯಗಳು ವಿಚಾರಕರಿಗೆ ಈ ಪುಸ್ತಕದಿಂದ ತಿಳಿಯ ಬರುತ್ತವೆ.

ಮಹನೀಯರಾದ ಬಸಪ್ಪನವರು ಮಹಲಿಂಗಪ್ಪನವರು ಅಂಕಲಕೋಟಿ ಸಾ॥ ರಾಣೆಬೆನ್ನೂರ ಇವರು ಪರಮಾತ್ಮನ ಸೇವಾ ಬುದ್ಧಿಯಿಂದ ಸರ್ವರೂ ತಿಳಿದುಕೊಂಡು ಆಚರಿಸಿ ಆತ್ಮೋನ್ನತಿ ಮಾಡಿಕೊಳ್ಳಲಿ ಎಂಬ ಉದ್ದೇಶದಿಂದ ಧರ್ಮ ಪ್ರಸಾರಾರ್ಥವಾಗಿ ೫೦೦ ಪುಸ್ತಕಗಳನ್ನು ತಯಾರಿಸುವ ಬಗ್ಯಾಗಿ ವೆಚ್ಚದ ಹಣ ಐವತ್ತಾಲ್ಕು ರೂಪಾಯಿ ಕೊಟ್ಟದ್ದರಿಂದ ನಾನು ಅವರಿಗೆ ತುಂಬಾ ಖುಶಿಯಾಗಿರುತ್ತೇನೆ. ಶಿವತತ್ವಾಪೇಕ್ಷೆಯುಳ್ಳವರಿಗೆ ಈ ಪುಸ್ತಕಗಳು ಅವರಿಂದ ಉಚಿತವಾಗಿ ಕೊಡಲ್ಪಡುತ್ತವೆ.

ಪ್ರಕಾಶಕ.

# ಶಿ ವಾ ನು ಭಾ ವ ದೀ ಪಿ ಕೆ.

ಪೋಷಕರು

ಬಸಪ್ಪನವರು ಅಂಕಲಕೋಟೆ. ರಾಣೇಬೆನ್ನೂರು.

ಈ ಪುಸ್ತಕವನ್ನು ಚನ್ನಮಲ್ಲಪ್ಪ ಘೂರೊಂದಪ್ಪ ಕೋರಿ, ಇವರು ಶಿವಲಿಂಗ ವಿಜಯ ಮುದ್ರಾಲಯದಲ್ಲಿ ಹಾವೇರಿಯಲ್ಲಿ ಮುದ್ರಿಸಿದರು. ಮತ್ತು ಅಲ್ಲಿಯೇ ಪ್ರಕಾಶಪಡಿಸಿದರು.

ಮೊದಲನೆಯ ಮುದ್ರಣ :— ೧೦೦೦ ಪ್ರತಿಗಳು

೧೯೪೦

# ಶಿ ವಾ ನು ಭಾ ವ ದೀ ಪಿ ಕೆ.

## ವಿ ಷ ಯ ಗ ಳ ಪ ಟ್ಟಿ.



—: ಶ್ರೀ ಬಸವ ಪ್ರಭವೇ ನಮಃ :—

# ಶಿವಾನುಭಾವ

## ದೀ * ಪಿ * ಕೆ.

### ೧. ಶಿವಸ್ತೋತ್ರ

೧. ನಗಜಾವರ ಕರುಣಾಮೃತ
ಸಾಗರ ಸದ್ಭಕ್ತ ಗಣತತಿಯ ನಿಜಮೋಕ್ಷ
ತ್ಯಾಗರ ಕೃಪಾಳು ಕರುಣಿಸಿ
ಬೇಗದಿ ನೆನಗೊಲಿದು ಸಲಹು ಬಸವ ಪ್ರಭುವೇ

### ೨. ಗುರುಸ್ತೋತ್ರ

೨. ಘನಗುರುವೆ ನಿಮ್ಮ ಶ್ರೀ ಪದ
ವನಜ ಯುಗಳಂಗಳೆನ್ನಯ ಹೃನ್ಮಂದಿರದೊಳ್
ಚಿನುಮಯ ಜೋತಿಯ ಬೆಳಗಿನೊ
ಳನವರತ ಬೆಳಗುತಲಿರಲಿ ಬಸವ ಪ್ರಭುವೇ

೩. ತಂದೆ ಶ್ರೀ ಗುರುವೆ ನಿಮ್ಮಯ
ಕಂದನ ಸುಹೃದಯ ಮಾನಸ ರಸನೆಯ ಕೊನೆಯೊಳ್
ಬಂದು ನೆಲಸೀ ಯನುಭಾವ
ಕಂದ ಪದಂಗಳನೆ ನುಡಿಸು ಬಸವ ಪ್ರಭುವೇ

೪. ಅಟಮಟ ಕುಟಿಲಗಳೆಂಬಾ
ಸಟೆಯೆಲ್ಲ ನೀಗಿ ನಿರ್ಮಲ ಹೃದಯಾಂತರದೊಳ್
ಷಟುಸ್ಥಲ ಜ್ಞಾನಾಮೃತಮಂ
ದಿಟವಾಗಿಯೆ ತೃಪ್ತಿಗೊಳಿಸು ಬಸವ ಪ್ರಭುವೇ

೫. ಏನುವನರಿಯದ ಮೂಢನ
ಮಾನಾಪಮಾನಮುಭಯವು ನಿನ್ನದು ಗುರುವೇ
ನಾನಡಿ ಗಣ ಪ್ರಾಸ ಮರಿಯೆ
ನೀಂನುಡಿಸಿದಂತೆ ನುಡಿವೆನು ಬಸವ ಪ್ರಭುವೇ

## ೪. ವೀರಶೈವದ ಆಧಿಕ್ಯ

೧. ಶೈವಸುಮಾರ್ಗ ದೊಳೆಲ್ಲಂ
ಶ್ರೀ ವೀರಶೈವ ಷಟ್‌ಸ್ಥಲಮಾರ್ಗವಿದಧಿಕಂ
ಈ ವೀರಶೈವ ಒಂದನೆ
ನೀವರುಹಿ ಪಾಲಿಸೆನ್ನಂ ಬಸವ ಪ್ರಭುವೆ

೨. ಶ್ರೀ ಶಿವನೆ ಲಿಂಗ ನಿಜವಹ
ನಾಶಿವನೇ ಭಕ್ತನಾದ ಭಕ್ತನ ಕರದೊಳ್
ಆ ಶಿವನೆ ಸೇವ್ಯಲಿಂಗಂ
ಆ ಶಿವನೆ ಸೇವಕಾಂಗಂ ಬಸವ ಪ್ರಭುವೇ

೩. ಈ ಮಹಲಿಂಗದ ನಿಜಮಂ
ತಾಮುಸ ಗುಣಮುಳ್ಳ ಮನುಜರ್ತಾವೆಂತರಿವರ್
ಪ್ರೇಮದಿ ಭಜಿಸುವ ಭಕ್ತರ
ಭ್ರೂಮಧ್ಯಾಲಯದೊಳಿರ್ಪ ಬಸವ ಪ್ರಭುವೇ

---

ಪದ್ಯ ೨. ಇದೇ "ದಾತಾಭೋಕ್ತಾ ಸ್ವಯಂ ಶಿವಃ" ಎಂಬ ಕೇವಲೀ ಭಾವವು

೩. ಲಿಂಗಧಾರಿಯಾದ ಭಕ್ತನ ಆಧಾರ (ಆಸನ) ಮೊದಲಾಗಿ ಭ್ರೂ (ಹುಬ್ಬುಗಳ) ಮಧ್ಯವೇ ಕಡೆಯಾದ ಆರು ಚಕ್ರಗಳಲ್ಲಿ ಆರು ಲಿಂಗಗಳನ್ನು ಗುರುವು ದೀಕ್ಷಾಕಾಲದಲ್ಲಿ ಪ್ರತಿಷ್ಠಿಸುತ್ತಾನೆ. ಶಿರಸಿನಲ್ಲಿರುವ ಚಿತ್ ಕಳೆಯನ್ನು ಭ್ರೂಮಧ್ಯಕ್ಕೆ ತಂದು ಅಲ್ಲಿನ ಮಹಾಲಿಂಗವನ್ನು ಇಷ್ಟಲಿಂಗವಾಗಿ ಹಸ್ತಕ್ಕೆ ಕೊಡುತ್ತಾನೆ.

೯. ಐದಹ ಭೂತವೆ ಅಂಗಂ
ಐದಿಂದ್ರಿಯ ವದನ ಐದು ವಿಷಯ ಪದಾರ್ಥಂ
ಐದು ಕೈ ಕರಣವೆಲ್ಲಂ
ಐದಕ್ಷರ ರೂಪವಯ್ಯ ಬಸವ ಪ್ರಭುವೇ

೧೦. ವಂಚಕರಿಗಂಗ ತತ್ವದ
ಪಂಚಕವೇ ಪಂಚ ವಿಂಶ ತತ್ವವುದಾಗಲ್
ವಂಚನೆಯುನಳಿದ ಶರಣಗೆ
ಪಂಚಾಕ್ಷರವಂಗ ಲಿಂಗ ಬಸವ ಪ್ರಭುವೇ

೧೧. ಪರಶಿವನ ಭಕ್ತರೆಲ್ಲರು
ವರ ವೀರಶೈವ ಕೇವಲ (ಸಮರಸ?) ನಡೆಯೊಳಗಿರ್ಪರ್
ಹರಿಯಜರ ಭಕ್ತರೆಲ್ಲರು
ಉರೆ ಭೇದ ನಡೆಯೊಳಿಪ್ಪರು ಬಸವ ಪ್ರಭುವೇ

## ೪. ಸದ್‌ಗುರುವಿನ ಪ್ರಯೋಜನ

೧೨. ಗುರುವೇ ಶಿವ ಶರಣ ಕಲ್ಪ
ತರುವೇ ನಿಜ ಭಕ್ತಿ ಜ್ಞಾನ ವೈರಾಗ್ಯದವಂ
ದಿರವೆ ಪರತತ್ವ ಚಿದ್ಘನ
ದೀವೆ ಮಹದೀವೆ ಕರುಣಿಸು ಬಸವ (ಪರಮ?) ಪ್ರಭುವೇ

---

೯. ಭಕ್ತನ ಅಂಗದ ಭೂತ ಇಂದ್ರಿಯ ವಿಷಯ ಕರಣಗಳು ಲಿಂಗದ ಅಂಗ ಮುಖ ಪದಾರ್ಥ ಹಸ್ತಗಳಾಗಿವೆ ಮೇಲೆ ಮಹಾಲಿಂಗವನ್ನು ಹೇಳಿರುವುದರಿಂದ ಇಲ್ಲಿ ಉಳಿದ ಐದನ್ನೇ ಹೇಳಿರುತ್ತಾರೆ.

೧೦. ಸರ್ವವೂ ಮಹಾದೇವನರೂಪಗಳೇ ಎಂದು ತಿಳಿಯದೆ ಅನೇಕ ಬೇರೆಬೇರೆ ವಸ್ತುಗಳಿರುವುವೆಂಬುವವರು ವಂಚಕರು. ಪಂಚಾಕ್ಷರವೂ ಅಂಗವೂ ಲಿಂಗ.

೧೧. ಮಹಾದೇವನೊಬ್ಬನೇ ರೂಪಾಂತರಗಳಿಂದ ತೋರಿ ಬರುವನೆಂಬುದೇ ವೀರಶೈವ (ಶಿವಭಕ್ತ) ರ ಮತ. ಇದೇ ಕೈವಲ್ಯಭಾವ ಉಳಿದವರು ಮಹಾದೇವ ( God ) ನನ್ನು ಭಿನ್ನವಾಗಿ ಭಾವಿಸುವ ನಡೆಯುಳ್ಳವರು.

೧೨. ಇಲ್ಲಿ ಹೇಳಲ್ಪಟ್ಟ ಲಕ್ಷಣವುಳ್ಳವನನ್ನೇ ಸದ್ಗುರು ಎಂದು ತಿಳಿಯಬೇಕು. ಹೆಸರಿನ ಮಾತ್ರಕ್ಕೆ ಗುರು ಎನಿಸಿಕೊಂಡರೆ ಸಾಲದು.

೧೩. ವರ ಗುರು ಕರುಣಾದೃಷ್ಟಿಯು
ದುರಿತ ಮರಣಗಳ ದುರ್ಭವ ದುಃಖದ ಕೃತಿಯುಂ
ಪರಿಹರಿಸಿ ನಿಮಿಷ ಮಾತ್ರದಿ
ವರ ಸುಜನರು ಎನಿಸುತಿಹುದು ಬಸವ ಪ್ರಭುವೇ

೧೪. ಗುರುಚರಣದ ವರ ಸೇವೆಯು
ಪರಧನಕೆ ನಿಂದೆ ಪರಸತಿ ಪರದೈವಕ್ಕಂ
ಎರಗುವ ಬುದ್ಧಿಯು ತೊಲಗಿಸಿ
ವರ ಭಕ್ತರು ಎನಿಸುತಿಹುದು ಬಸವ ಪ್ರಭುವೇ

೧೫. ಗುರು ಪಾದ ಪೂಜೆ ಮಾಡಲು
ಗುರು ಭಕ್ತಿ ಲಿಂಗ ಪೂಜಾ ಚರ ದಾಸೋಹಂ
ಮರೆಯುನೆ ಎಚ್ಚರದೊಳಿರುವ
ನಿರುಪಾಧಿ ಭಕ್ತನೆನಿಸುದು ಬಸವ ಪ್ರಭುವೇ

೧೬. ವರ ಗುರು ಕೃಪೆಯಿಂ ಭಕ್ತರ
ಶರಿರ ಮನ ಪ್ರಾಣ ಮೂರು ಲಿಂಗವೆ ಯಾಗಲ್
ನೆರೆ ತುಂಬಿ ಹುಳುವಿನ (ಕೀಟದ?) ನ್ಯಾಯದಿ
ಗುರು ಮುಟ್ಟಿ ಗುರುವೆ ಅಪ್ಪನು ಬಸವ ಪ್ರಭುವೇ

೧೭. ಗುರು ಚರಣ ಲಿಂಗ ಜಂಗಮ
ಗುರು ಚರಣ ವಿಷ್ಣು ಪ್ರಾಣಂ ದೇವಂ ಭಕ್ತಂ
ಗುರು ಚರಣ ತೀರ್ಥ ಶೇಷವು
ಗುರು ಚರಣ ಮಹದರುಹು ಕುರುಹು ಬಸವ ಪ್ರಭುವೇ

೧೮. ಗುರು ಚರಣವೆ ಕ್ರಿ ಜ್ಞಾನಂ
ಗುರು ಚರಣ ನಡೆಯು ನುಡಿಯುಂ ರೂಪಂ ರುಚಿಯುಂ
ಗುರು ಚರಣ ತಂದೆ ತಾಯ್ಗಳು
ಗುರು ಚರಣ ಗತಿಯು ಮತಿಯುಂ ಬಸವ ಪ್ರಭುವೇ

---

೧೬. ವೀರಶೈವರು ಗುರು ಶಿಷ್ಯರ ಅಭೇದವನ್ನು ಮಾನಿಸುವರು.
೧೭—೨೦ ಗುರುಭಕ್ತಿಯ ಅತಿವರ್ಣನೆ. ಇಲ್ಲಿ ಹರ ಎಂದರೆ ಕೈಲಾಸದ ಶಿವ

೧೯. ವರ (ಪರ?) ಗುರುವೆ ಮುಕ್ತಿಗೊಡೆಯನು
ಗುರುವೇ ಪರತತ್ವ ಸಾಕ್ಷಾತ್ಕರ ಪರ ಬೊಮ್ಮಂ
ಪರಕೆ ಪರವಾದ ಸದ್ಗುರು
ಚರಣ ಯುಗ ಶರಣ ಹರಣಂ ಬಸವ ಪ್ರಭುವೇ

೨೦ ಗುರುವಿನ ಮಹಿಮೆಯ ಬಸವಂ
ನೆರೆಬಲ್ಲ ಚನ್ನ ಬಸವ ಪ್ರಭು ತಾಂ ಬಲ್ಲಂ
ವರ ಪ್ರಮಥರೆಲ್ಲ ಬಲ್ಲರು
ಹರನೇ ಮೊದಲಿನ ಬಲ್ಲಹ (ಬೋಧಕ?) ಬಸವ ಪ್ರಭುವೇ

## ೫. ಸ್ಥಾವರಭಕ್ತಿ ನಿರಸನ

೨೧. ಗುರು ಕೊಟ್ಟ ಪರಮ ಲಿಂಗವ
ಮರೆದು ಗುಡಿಲಿಂಗ ದೈವಂಗಳಿಗೆರಗುವ ಮಾ
ಮರುಳು ಮನುಜಂಗೆ ಬಲು ಭವ
ಭಾರವೆ ತಾಂ ಪ್ರಾಪ್ತಿಯಯ್ಯ ಬಸವ ಪ್ರಭುವೇ

೨೨. ತನ್ನಿಷ್ಟ ಲಿಂಗವಿರುತಿರೆ
ಅನ್ಯಪ್ರತಿಮೆ (ದೈವಂ) ಗಳಾರಾಧನೆಯನು ಮಾಳ್ಪ
ಕುನ್ನಿ ಮನುಜರಿಗೆ ಭವ ಭವ
ಸನ್ನಿಧಿಯೇ ಪ್ರಾಪ್ತಿಯಯ್ಯ ಬಸವ ಪ್ರಭುವೇ

೨೩. ಗಂಡ ಶಿವಲಿಂಗ ವಿರುತಿರೆ
ತಂಡದ ಭಿನ್ನ ದೈವಾರ್ಚನೆ ಮಾಳ್ಪ
ಮೊಂಡ (ಮಂದ?) ಮನುಜರಿಗೆ ಮರು ಬ್ರ
ಹ್ಮಾಂಡವೆ ತಾಂ ಪ್ರಾಪ್ತಿಯಯ್ಯ ಬಸವ ಪ್ರಭುವೇ

೨೪ ಒಡೆಯ ಮಹ ಲಿಂಗವಿರುತಿರೆ
ಅಡಿಗೆರಗಿ ಗುಡಿಯ ಲಿಂಗಾ(ದೇವತಾ?)ರ್ಚನೆಯನು ಮಾಳ್ಪ
ತುಡುಗು ಮನುಜರಿಗೆ ಭವ ತಾ
ನೊಡನೆಯೆ ಬಿಡದಿಪ್ಪುದಯ್ಯ ಬಸವ ಪ್ರಭುವೇ

೩೩. ಬಸುರಸು ವಾಜ್ಞನಡಂದದಿ
ನೆಸೆವ ಕಸ್ ಕಾಂತಿ ರೂವು ರುಚಿಗಳ ಪಾಂಗಿಂ
ಶಶಿ ಬೆಳುದಿಂಗಳ ವೋಲಿಹು
ಡೆಸೆವ ಶಿವ ಶಕ್ತಿ ಸಂಗಂ ಬಸವ ಪ್ರಭುವೇ

೩೪. ಬಸವನ ಅನುಭಾವವು ಬರೆ
ವಸುಧೆಯ ಸೂತಕವುದೆಲ್ಲ ಪರಿಹರವಹುದೈ
ಬಸವನ ನಾಮವ ನೆನೆವನ
ರಸನೆಯೆ ಗುರುವೆಂದೆಂಬೆನು ಬಸವ ಪ್ರಭುವೇ

೩೫. ಬಸವನೆ ಘ್ರಾಣ ನ ಕಾರಂ
ಬಸವನೆ ವರ ಜಿಹ್ವೆ ನೇತ್ರ ಮಕಾರ (ವರ್ಣ?) ಶಿಕಾರಂ
ಬಸವನೆ ತ್ವಕ್ಕು ವಕಾರಂ
ಬಸವನೆ ಶ್ರೋತ್ರ ಯಕಾರಂ ಬಸವ ಪ್ರಭುವೇ

೩೬. ಬಸವನಸು ಮೂಲ ಮಂತ್ರಂ
ಬಸವನೆ ಎಡುಎದೆ ಇಪೆರಡಕಾರ ಉಕಾರಂ
ಬಸವನೆ ಬೆನ್ನು ಮಕಾರಂ
ಬಸವನೆ ಬಲ ಮೂಲ ಮಂತ್ರ ಬಸವ ಪ್ರಭುವೇ

೩೭. ಬಸವನ ಅರಿವು ಕ್ರಿಯೆಕೋಡು
ಅಸವು ಗುರು ಶಬ್ದಕೆರಡು ಕೊಂಬುಂ (ಕೋಡುಂ) ಟವಂ
ಒಸೆದು ವಿಚಾರಿಸಿ ನೋಡಲು
ಬಸವನೆ ಗುರು ಗುರುವೆ ಬಸವ ಬಸವ ಪ್ರಭುವೇ

೩೮. ಶಿವ ಮಾಡಲಹುದು ಮೂಜಗ
ವಿವುಗಳ ಭಕ್ತಿಯು ಬೆಳೆಯಿಂ (ಬೀಜದಿ?) ಸಲಹುವ ಬಸವಂ
ಶಿವನಧಿಕ ಮೂರು ಲೋಕಕೆ
ಶಿವನಿಂದಧಿಕಂ ಬಸವಂ ಬಸವ ಪ್ರಭುವೇ

೨೫. ಕಂಗಳ ಜೋತಿಯು ಲಿಂಗವ
ಹಿಂಗಿ ಭವಿ ಶೈವ ದೈವಾರ್ಚನೆಯನುಮಾಳ್ಪ
ಮಂಗ ಮನುಜರಿಗೆ ಜನ್ಮದ
ಸಂಗವೆತಾಂ ಪ್ರಾಪ್ತಿಯಯ್ಯ ಬಸವ ಪ್ರಭುವೇ

೨೬. ಗುರು ಕೊಟ್ಟ ಲಿಂಗವಿರುತಿರೆ
ಪರ ದೈವಕೆರಗಿ ಬೇಡುತ ಕರವನು ಮುಗಿವಾ
ನರಪಶು ಮೂರ್ಖಗೆ ಬಹು ಭವ
ದಿರವೇ ತಾಂ ಪ್ರಾಪ್ತಿಯಯ್ಯ ಬಸವ ಪ್ರಭುವೇ

೫ ಸದ್ಗುರುವಿನ ಪೂಜ್ಯತೆ.

೨೭. ಇಷ್ಟ ಮಹಲಿಂಗವಿತ್ತಾ
ಶ್ರೇಷ್ಠ ಸದು ಗುರುವ ತಮ್ಮಯ ಚಿಟ್ಟಗನೆನುತಂ
ಅಟ್ಟೊಳಿಗನನು ಹೇಳುವ
ದುಷ್ಟಗೆ ದಾಸೋಹವಿಲ್ಲ ಬಸವ ಪ್ರಭುವೇ

೨೮. ಅಸಮ ಸದುಗುರುವ ಕತೆಯುತ
ಕಸ ನೀರ ಹೊರಿಸಿ ಹೊಟ್ಟೆಯ ಹೊರೆವಾ ದುಷ್ಟಂ
ಗಸಮ ಕುಮತಿ ನರನಿಗೆ ದು
ರ್ದೆಸೆಯೇ ತಾಂ ಪ್ರಾಪ್ತಿಯಯ್ಯ ಬಸವ ಪ್ರಭುವೇ

---

೨೧—೨೬ ಇಷ್ಟಲಿಂಗವು ಆತ್ಮ (ತನ್ನ) ಸ್ವರೂಪ ಮತ್ತು ಬ್ರಹ್ಮಾಂಡದ ರೂಪ ಉಳ್ಳುದು. ಅದರ ಭಕ್ತಿಯಿಂದ ಅದ್ವೈತ ಸಿದ್ಧಿಯಾಗುತ್ತದೆ. ಗುಡಿಯ ಲಿಂಗ ಅಥವ ಪ್ರತಿಮೆಗಳು ಭಿನ್ನ (ದ್ವೈತ) ದ ಅಭಿಪ್ರಾಯವನ್ನು ಹುಟ್ಟಿಸುತ್ತವೆ. ಆದುದರಿಂದ ಅವುಗಳಲ್ಲಿ ಭಕ್ತಿ ಇಡುವುದು ಬೇಡ. ಎಲ್ಲವೂ ಲಿಂಗ ಎಂದು ಯೋಚಿಸುವುದಾದರೆ ಭೂಮಿ, ಶಿಲೆ, ಪ್ರತಿಮೆಗಳು ಆಚಾರ ಲಿಂಗವಾಗುತ್ತವೆ. ಇವುಗಳ ಪೂಜೆ ಆತ್ಮನಿಗೆ (ಅಂಗಕ್ಕೆ) ಉತ್ತಮವಲ್ಲ. ಮಹಾಲಿಂಗವು ವ್ಯಕ್ತವಾಗಿರುವ ಪ್ರಾಣದೊಡನೆ ಕೂಡಿದುದು. ಆದುದರಿಂದ ಮಹಾಲಿಂಗರೂಪದ ಇಷ್ಟಲಿಂಗವನ್ನೇ ಪೂಜಿಸಬೇಕು.

೨೫ ಕಣ್ಣುಗಳ ಕನೀನಿಕೆ (ಪಾಪೆ = ಹಾಹೆ) ಯಲ್ಲಿನ ಪ್ರಾಣದ ರೂಪವನ್ನೇ ಇಷ್ಟಲಿಂಗವಾಗಿ ಮಾಡಿರುತ್ತಾರೆ.

೨೯. ಹರನಿಂದಧಿಕಂ ಸದ್ಗುರು
ವರನೆಂದು ತಿಳಿಯದೆ ಒರೆದೆ ಜಿವಾವಮನುಜಂ
ಪರಿಪರಿಯ ಭವದ ಜನ್ಮಕೆ
ಗುರಿಯಹ ನೆಂಬುದು ವಚನಂ ಬಸವ ಪ್ರಭುವೇ

೩೦. ಹರಿಯಜ ದೇವರನೆಲ್ಲಂ
ಪರಶಿವನ ಸಮವ ಕಾಣುವ ಮರುಳಂಗೆ ಶ್ರೀ
ಗುರುವ ನರನೆಂದು ತಿಳಿವಾ
ನರರಿಗೆ ಕೈವಲ್ಯವಿಲ್ಲ ಬಸವ ಪ್ರಭುವೇ

೩೧. ಶ್ರೀ ಗುರು ಬೋಧೆಯ ವಚನವ
ಆಗಮಕೆ ಸರಿಯದಲ್ಲೆಂದು ಜಿವಾವಮನುಜಂ
ಬೇಗನೆ ದುರ್ಘವದತ್ತಂ
ಹೋಗುತ ದುಃಖದಿ ಬಳಲ್ವ ಬಸವ ಪ್ರಭುವೇ

## ೬ ಶಿವ, ಶಕ್ತಿ, ಇವರ ಅವಿನಾಭಾವ.

೩೨. ರವಿಯು ರವಿಕಿರಣದಂತೆಯು
ಪವನ ನಭದಂತೆ ಕುಸುಮ.ಮದರಸರಿಮಳದೋಲ್
ಸವಿ ಸಕ್ಕರೆಯಂತೆಯು ದಲ್
ಶಿವ ಶಕ್ತಿಗೆ ಭೇದವಿಲ್ಲ ಬಸವ ಪ್ರಭುವೆ

---

೨೯. ಹರನು ಮನುಷ್ಯನ ಪ್ರಾರಬ್ಧವನ್ನು ಭೋಗಿಸಲು ಅವಕಾಶಕೊಟ್ಟಿರುತ್ತಾನೆ. ಗುರುವು ಅಂತಹ ಪೂರ್ವ ಜನ್ಮದ ಕರ್ಮವನ್ನು ತಪ್ಪಿಸುವನು ಮತ್ತು ತಾನು ವಿಶೇಷವಾಗಿ ಶಿವಪೂಜೆ ಮಾಡಿದ ಮಹಿಮೆಯ ಬಲದಿಂದ ಅವನ ದುಃಖವನ್ನು ಕಡಿಮೆ ಮಾಡುತ್ತಾನೆ. ( ಶ್ರೀಮಂತನು ಬಡವನ ಸಾಲವನ್ನು ತೀರಿಸಿದಹಾಗೆ). ಹೀಗೆ ದುಡಿಯದೆ ಸುಖವು ಗುರುವಿನಿಂದ ಬರುವುದರಿಂದ ಹರನಿಗಿಂತ ಗುರು ಶ್ರೇಷ್ಠ ಎಂದು ಭಾವಿಸಬೇಕು

೩೯. ವಸುಧೆಯು ದೈವಂಗಳೊಳಂ
ಅಸಮಾಕ್ಷನಧಿಕ ಪೆರ್ಚಿನ (ಹೆಚ್ಚಿನ) ಸತ್ ಪ್ರಮಥರೊಳಂ
ಬಸವ ನೆರೆಯಧಿಕ ನೆನುತಲಿ
ಒಸೆದು ಜಗ (ಜನ) ಸಾರುತಿಹುದೈ ಬಸವ ಪ್ರಭುವೇ

### ೮. ಇಂತಿದು ಬಸವನ ಘನತೆ

### ೯. ಮಾಯಾ ಸಂಸಾರ ನಿರಸನ.

೪೦ ಮಲಗಳು ಮೂರರ ಮಾಯಾ
ಬಲೆಯೊಳಗೆ ಸಿಲ್ಕಿ ಕೈಕಾಲೊದ್ದಾಡುಪೆ ನಾಂ
ಸಲೆ ನಿಮ್ಮನೆಂತು ಕಾಂಬೆನು
ಮಲಹರನೆ ಸಲಹು ಎನ್ನಂ ಬಸವ ಪ್ರಭುವೇ

೪೧. ಆಸೆಯುಹ ಕೂಸನೆತ್ತಲು
ರೋಷವಹ ತಾಯಿ ಬಂದುಗೆ ನಿಂದಿರುತಿಹಳೈ
ಆಸೆ ರೋಷಗಳ ಕಾಟದ
ಗಾಸಿಯನು ಬಿಡಿಸಿ ಸಲಹೈ ಬಸವ ಪ್ರಭುವೇ

೪೨. ಮನವಹ ಮರ್ಕಟ ತಾ ತನು(ತರ.?)
ಕೊನೆ ಕೊನೆಗೆ ಹಾರಿ ಎನ್ನಂ ಬಳಲಿಸುತಿಹುದೈ
ಅನವರತ ನಿಮ್ಮ ಶ್ರೀ ಪದ
ನೆನಹಿನೊಳಗಿರಿಸು ದೇವಾ ಬಸವ ಪ್ರಭುವೇ

೪೩ ತಂದೆಯು ಜನನಿಯನುಜರುಂ ತನುಜರು
ಬಂಧುಜನ ಬಳಗವೆಂಬಾ ತೊಡರಂ ಬಿಡಿಸೈ
ಸಂದ ಸಲೆ ಪ್ರಮಥ ಗಣಗಳ
ದಂದುಗದೊಳಿರಿಸಿ ಸಲಹೈ ಬಸವ ಪ್ರಭುವೇ

---

೩೧. ಇಲ್ಲಿ ಆಗಮ ಎಂದರೆ ಲೌಕಿಕ ಶಾಸ್ತ್ರ ಎಂದು ಅರ್ಥ.
೩೯. ಬಸವನು ಅನಾದಿಭಕ್ತ. ಭಕ್ತನ ಸೃಷ್ಟಿಯಾದಮೇಲೆ ಅವನ ಪ್ರಾರ್ಥನೆಯ ಮೇರೆಗೆ ಶಿವನು ಜಂಗಮನಾಗಿ ಅವತರಿಸಿದನು.

೪೪. ಸಂಸಾರವೆಂಬ ಸರ್ಪನ
ದುಸ್ತರವು ಎಂಬ ನಂಜು ತಲೆಗೆ ಅಡರಿಹುದೈ
ಆಸಕ್ತಿನಿಡಕೆ ಗಾರುಡ
ಲೇಸಿತ್ತು ಸಲಹು ದೇವಾ ಬಸವ ಪ್ರಭುವೇ

## ೧೦ ಪಂಚ ವಿಷಯಾದಿ ನಿರಸನ.

೪೫. ಪಂಚೇಂದ್ರಿ ಎಂಬ್ಬ ಶುನಿಗಳು
ಹಂಚಿ ಹರಿ ತಿಂದು ಎನ್ನಂ ಕಾಡುತ್ತಿಹವೈ
ಪಂಚ ವಿಷಯುಗಳ ತೊಲಗಿಸಿ
ವಂಚಿಸದೆ ಸಲಹು ಎನ್ನಂ ಬಸವ ಪ್ರಭುವೇ

೪೬. ದುಷ್ಟಾಹಂ ಕೃತಿ ಎನಿಸುವ
ಅಷ್ಟಮದ ಗಜಗಳೆನ್ನಂ ಮೆಟ್ಟುತ ಇಹವೈ
ಕಷ್ಟವ ಬಿಡಿಸುತ ನೀ ಕ
ಣ್ಣಿಟ್ಟುರೆ ಸಲಹೈ ದೇವಾ ಬಸವ ಪ್ರಭುವೇ

೪೭. ಹಸಿವು ತೃಷೆ ಚಿಂತೆ ಎನಿಸುವ
ಮಸೆವ ಉರಿಯುಲಗು ಎನ್ನಂ ಕೊರೆವುತಲಿಹುದೈ
ಗಸಣಿಯನು ಬಿಡಿಸಿ ನಿಮ್ಮಯ
ಶಿಸು ಎಂದು ಸಲಹು ದೇವಾ ಬಸವ ಪ್ರಭುವೇ

೪೮. ತುಚ್ಛವಹ ಮಿಥ್ಯೆ ವೃಶ್ಚಿಕ
ಚುಚ್ಚಿ ವಿಷವೇರಿ ಎನ್ನಂ ಬಾಧಿಸುತಿಹುದೈ
ಅಚ್ಚ ಪರಮಾರ್ಥ ದೌಷಧಿ
ಹಚ್ಚುತಲಿ ಸಲಹು ದೇವಾ ಬಸವ ಪ್ರಭುವೇ

## ೧೧. ಅರಿಷಡ್ವರ್ಗ ನಿರಸನ.

೪೯. ಕಾಮದ ಕಳವಳದಿಂದಂ
ಕಾಮಿಸಿ ತನ್ನ ಸತಿಯನ್ನು ಕೂಡುವುದುಚಿತಂ
ತಾಮಸದೊಳನ್ಯ ಧನ ಪರ
ಕಾಮಿನಿ ಸಂಗನದು ಭಂಗ ಬಸವ ಪ್ರಭುವೇ

೫೦ ಕ್ರೋಧದ ಕರ್ಕಶ ದಿಂದಂ
ವೇಧಿಪ ದುಃಕರಣಗಳ ಕ್ರೋಧಿಪುದುಚಿತಂ
ಆದಿಯ ಗುರು ಹಿರಿಯರೊಳಂ
ಕ್ರೋಧಿಸುವ ಕೋಪ ಪಾಪಂ ಬಸವ ಪ್ರಭುವೇ

೫೧. ವೈಭವದ ತೀರ್ಥ ಶೇಷವ
ತಾಂ ಬಯಸಿ ಗಳಿಸಿ ಲೋಭಿಯು ಎನಿಸುವುದುಚಿತಂ
ಶೋಭಿಪ ಸತ್ಪಾತ್ರದೊಳಂ
ಲೋಭಿಸುವ ಲುಬ್ಧ ಮೂಢಂ ಬಸವ ಪ್ರಭುವೇ

೫೨. ಸಾಹಸ ಗುರು ಚರ ಪರ ದಾ
ಸೋಹವ ಮಾಡುವ ನಡೆಯಂ ಮೋಹಿಪುದುಚಿತಂ
ಹೇಹ (ಯ?) ದ ಸಂಸೃತಿ ಕೂಪವ
ಮೋಹಿಪ ಮಮತೆಯೆ ಕುಮತಿಯು ಬಸವ ಪ್ರಭುವೇ

೫೩. ಮದ ಮುಖ ದುರ್ಜನ ಧೂರ್ತರ
ಇದಿರಲಿ ತಾ ಕಂಡು ಮದಕೆ ಮತ್ಸರಿಸುವುದೈ
ಸದಮಲ ಹೃದಯರ ಕಂಡರೆ
ಮದಮತ್ಸರಗಳ ಬಿಡುವುದು ಬಸವ ಪ್ರಭುವೇ

೫೪. ಅರಿ ಷಡ್ವರ್ಗಂಗಳು ತಾವ್
ದುರಿತದಿ ದುರ್ಜನರ ಕೊಲುವ ಶತ್ರುಗಳಹರೈ
ಶರಣರ ಸಂತತಿಗಳಿಗವು
ಉರೆ ಸನ್ಮಿತ್ರರೆ ಅಪ್ಪರು ಬಸವ ಪ್ರಭುವೇ

## ೧೨. ನವ ಪ್ರಣವ ವಿಚಾರ.

೫೫. ಚಿದ್ಘನ ನಾದ ಅಕಾರಂ
ಚಿದ್ಘನ ವರ ಬಿಂದು ಕಳೆ ಉಕಾರ ಮಕಾರಂ
ಚಿದ್ಘನ ಶಕ್ತಿ ಸಮೇತಂ
ಚಿದ್ಘನ ಮಹ ಮೂಲ ಮಂತ್ರ ಬಸವ ಪ್ರಭುವೇ

೫೬. ಪ್ರಣವದ ತಾರೆ ನಕಾರಂ
ಪ್ರಣವದ ದಂಡವು ಕುಂಡಲಿ ಮಕಾರ (ಮ್ಯಾರ್ಣ?)ಶಿಕಾರಂ
ಪ್ರಣವಾರ್ಥೇಂದು ವಕಾರಂ
ಪ್ರಣವದ ದರ್ಪಣ ಯಕಾರ ಬಸವ ಪ್ರಭುವೇ

೫೭. ಇಂತೀ ನವವಿಧ ಪ್ರಣವದ
ಮಂತ್ರಂಗಳೇಕವಹ ನಿಜ ಪರ ಬೊಮ್ಮವ ತಾಂ
ಸಂತತ ಪಾಜ್ಞನ ಭಾವದಿ
ಚಿಂತಿಪನೇ ಪರಬೊಮ್ಮಂ ಬಸವ ಪ್ರಭುವೇ

## ೧೩. ಪಂಚ ಕೃತ್ಯಾಧೀಶ್ವರರ ಉತ್ಪತ್ತಿ

೫೮. ನೆರೆ ಶಿವನಿಂದ ಸದಾಶಿವ
ನಿರುತ ಸದಾಶಿವನಿಂದೀಶ್ವರ ನವಸಿಂದಂ
ಚಿರರುದ್ರ ರುದ್ರ ನಿಂದಂ
ಹರಿಯಾ ಹರಿಯಿಂದ 'ಜನ್ಮೆ' (ಬೊಮ್ಮ) ಬಸವ ಪ್ರಭುವೇ

೫೯. ಇಂತೊಗೆದ ಬೊಮ್ಮನಿಂದಲ
ನಂತವು ಲೋಕಾಧಿ ಲೋಕ ಸಚರಾಚರವೈ
ಮುಂತೆ ಇವರೆಲ್ಲ ಪರಶಿವ
ಚಿಂತನೆಯಿಂದಾದರಯ್ಯ ಬಸವ ಪ್ರಭುವೇ

## ೧೪ ಇಪ್ಪತ್ತೈದು ತತ್ವದ ವಿಭಾಗ (ಹಸುಗೆ)

೬೦ ಶಿವನೈದು ಮುಖಂಗಳಿಂದ
ಅವನಿ ಮೊದಲಾಗಿ ಪಂಚಕ ತತ್ವಮುವುಗಳಿಂ
ವಿವರಿಸಲು ಪಂಚ ವಿಂಶತಿ
ನಿವಹಂಗಳಾದವಯ್ಯಾ ಬಸವ ಪ್ರಭುವೇ

---

ಶಿ. ಲೀ. ೧೩ ಪಂಚ ಕೃತ್ಯಗಳು = ಸೃಷ್ಟಿ, ಸ್ಥಿತಿ, ಲಯ. ತಿರೋಧಾನ, ಅನುಗ್ರಹ. ಇವುಗಳನ್ನು ಕ್ರಮವಾಗಿ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ ಇವರು ಮಾಡುವರೆಂದು ವಾತುಲಾಗಮದ ೧ ನೆಯ ಪಟಲದಲ್ಲಿದೆ.

೬೧ ಸಾಧು ಸದು ಕ್ರಿಯೆಯಾ ಸಂ
ಮೋದ ಗುದ ಗುಹ್ಯ ಪಾದಂ ಪಾಣಿಯು ವಾಕುಂ
ಆದಿಯು ಸದ್ಯೋಜಾತನ
ಮೇದಿನಿಯಾ ತತ್ವ ವೈದು ಬಸವ ಪ್ರಭುವೇ

೬೨. ಚಾರು ಸುಸಾರವಿದೆನಿಸುವ
ಸೌರಭ ರಸ ರೂಪು ಸ್ಪರ್ಶನ ಶಬ್ದಂಗಳ್
ಪೂರೈಸಿ ವಾಮದೇವನ
ವಾರಿಯು ತತ್ವಂಗಳೈದು ಬಸವ ಪ್ರಭುವೇ

೬೩. ಸಂಜ್ಞೆಮಯವಾದ ಘ್ರಾಣಂ
ಸುಜ್ಞಾನ ಜಿಹ್ವೆ ನೇತ್ರವು ಗಾತ್ರಂ ಶ್ರೋತ್ರಂ
ಪ್ರಜ್ಞಾನನಪ್ಪಘೋರನ
ಅಗ್ನಿಯು ತತ್ವಂಗಳೈದು ಬಸವ ಪ್ರಭುವೇ

೬೪. ಚರರೂಪವಾದ ಪ್ರಾಣಂ
ಇರದೆಯಪಾನ ವ್ಯಾನ ಉದಾನ ಸಮಾನಂ
ಪರತರವಹ ತತ್ಪುರುಷನ
ಮರುತನ ತತ್ವಂಗಳೈದು ಬಸವ ಪ್ರಭುವೇ

೬೫. ಶಾಶ್ವತವಾದ ಸುಚಿತ್ತಂ
ಲೇಸೆನಿಪ ಬುದ್ಧಿ ನಿರಹಂ ಸುಮನ ಸುಜ್ಞಾನಂ
ಈಶಾನ್ಯ ಮುಖದೊಳೊಗೆದಾ
ಕಾಶದ ತತ್ವಂಗಳೈದು ಬಸವ ಪ್ರಭುವೇ

## ೧೫. ಮಿಶ್ರ ಪಂಚೀಕರಣ ವಿಭಾಗೆ

೬೬. ಪೃಥ್ವಿಯ ಪೃಥ್ವಿಯು ಪಾಯುವು
ಪೃಥ್ವಿಯ ಅಪ್ಪುವು ಗಂಧವು ಅಗ್ನಿಯೆ ಘ್ರಾಣಂ
ಪೃಥ್ವಿಯ ವಾಯುವೆ ಪ್ರಾಣಂ
ಪೃಥ್ವಿಯ ಆಕಾಶ ಚಿತ್ತ ಬಸವ ಪ್ರಭುವೇ

೬೭. ಅಪ್ಪುವಿನ ಪೃಥ್ವಿ ಗುಹ್ಯಂ
ಅಪ್ಪುವಿನ ಅಪ್ಪು ರಸವಗ್ನಿಯೆ ನಾಲಿಗೆಯೈ
ಅಪ್ಪುವಿನ ಗಾಳಿಯಪಾನಂ
ಅಪ್ಪುವಿನಾಕಾಶ ಬುದ್ಧಿ ಬಸವ ಪ್ರಭುವೇ

೬೮. ಅಗ್ನಿಯ ಪೃಥ್ವಿಯು ಪಾದಂ
ಅಗ್ನಿಯ ನಿಜದಪ್ಪು ರೂಪು ಅಗ್ನಿಯೆ ನೇತ್ರಂ
ಅಗ್ನಿಯ ವಾಯು ವ್ಯಾನಂ
ಅಗ್ನಿಯ ಆಕಾಶ ಹಮ್ಮು ಬಸವ ಪ್ರಭುವೇ

೬೯. ವಾಯುವಿನ ಪೃಥ್ವಿ ಪಾಣಿಯು
ವಾಯುವಿನ ಅಪ್ಪು ಸ್ಪರ್ಶವು ಅಗ್ನಿಯೆ ತ್ವಕ್ಕೈ
ವಾಯುವ ವಾಯು ಉದಾನಂ
ವಾಯುವಿನಾಕಾಶ ಮನವು ಬಸವ ಪ್ರಭುವೇ

೭೦. ಆಕಾಶದವನಿ ವಾಕು ( ವಚನ )
ಆಕಾಶದಪ್ಪು ಶಬ್ದವು ಅಗ್ನಿಯೆ ಶ್ರೋತ್ರಂ
ಆಕಾಶ ವಾಯು ಸಮಾನ
ಆಕಾಶಾಕಾಶಶೀವು (ಜ್ಞಾನ) ಬಸವ ಪ್ರಭುವೇ

೭೧. ಪಂಚ ಮುಖದಿಂದಲುದಯಿಸಿ (ಉದಿಸುತ)
ಪಂಚ ವಿಧವಾಗಿ ತೋರ್ಪ ತತ್ವಂಗಳು ತಾಂ
ಪಂಚ ವಿಂಶತಿ ಯಾಗಿಹ
ಸಂಚುವ ನಿಮ್ಮಿಂದಲರಿದೆ ಬಸವ ಪ್ರಭುವೇ

## ೧೬. ಪಂಚ ಭೂತಗಳ ವರ್ಣಗಳು.

೭೨. ಭೂಮಿಯ ಬೆಳೆಯುದು (ಮೂಲವು ?) ಚಿನ್ನಂ
ಭೂಮಿಯೊಳು ಜಾಲಗಾರರ ಚಿನ್ನವ ತೆಗೆವಂ
ಪ್ರೇಮದಿ ಭಾವಿಸಿ ನೋಡಲು
ಭೂಮಿಯು ನಿಜ ಪೀತವರ್ಣ ಬಸವ ಪ್ರಭುನೇ

೭೩. ನೀರುಂಡ ಮುತ್ತು ಧವಲಂ
ದೂರಿಂದಲಿ ನೋಡೆ ನೀರು ಬಹು ಬಿಳಿದಹುದೈ
ಚಾರು ವಿಚಾರಿಸಿ ನೋಡಲು
ವಾರಿಯೆ ನಿಜ ಶ್ವೇತ ವರ್ಣ ಬಸವ ಪ್ರಭುವೇ

೭೪. ಅಗ್ನಿಯೊಳಗಿಟ್ಟ ಲೋಹಂ
ಅಗ್ನಿಯ ಮಯ ಕೆಂಡವಾಗಿ ಶೋಭಿಸುತಿಹುದೈ
ಪ್ರಾಜ್ಞರು ಶೋಧಿಸಿ ನೋಡಲು
ಅಗ್ನಿಯೆ ಮಾಂಜಿಷ್ಟ ವರ್ಣ ಬಸವ ಪ್ರಭುವೇ

೭೫. ನೀರುಂಡ ಫಲವು ಬಿಳುಪದು
ಮಾರುತ ತಾಂ ಮೇಲೆ ಸುಳಿಯೆ ಹಸುರಾಗುವುದೈ
ಪಾರ ವಿಚಾರದಿ ನೋಡಲು
ಮಾರುತವು ಹರಿತವರ್ಣಂ ಬಸವ ಪ್ರಭುವೇ

೭೬. ಉಭಯ ರವಿಶಶಿಗಳಡಗಲು
ನಭ ಕಪ್ಪು ಮುಸುಕಿ ಕಾವಳ ಮಯವಾಗುವುದೈ
ವಿಬುಧರು ಶೋಧಿಸಿ ನೋಡಲು
ನಭವೇ ಕಪೋತ ವರ್ಣಂ ಬಸವ ಪ್ರಭುವೇ

೭೭. ಜ್ಯೋತಿಯ ರೂಪ ನಿರೀಕ್ಷಿಸೆ
ಪೀತಾದಿ ಪಂಚ ವರ್ಣಂ ತೋರುತಲಿಹುದೈ
ಭೂತಗಳ ಮೂಲವಹ ಪರ
ಮಾತುಮನು ಜ್ಯೋತಿವರ್ಣಂ ಬಸವ ಪ್ರಭುವೇ

೭೮. ಪೃಥ್ವಿ ಮೊದಲಾರು ತತ್ವಂ
ಪೀತಮೊದಲಾರು ವರ್ಣಂಗಳ ಪರಿಪೂರ್ಣಂ
ಸಾತ್ವಿಕವು ಆದ ಚಿದ್ಘನ
ತತ್ವವ ನಿಮ್ಮಿಂದಲರಿದೆ ಬಸವ ಪ್ರಭುವೇ

## ೧೭. ಪಂಚಾಕ್ಷರಿಯೋ ಪಂಚವಿಂಶತಿ ತತ್ವಗಳು.

೭೯. ಹಂಚಿದ ಭೂತದ ದೇಹದ
ಸಂಚಿತದಕ್ಷರ ತೊಡೆದಿಹ ಪರಶಿವ ಶರಣಂ
ಪಂಚಕ ವಿಂಶತಿ ತತ್ವಂ
ಪಂಚಾಕ್ಷರ ಸ್ವರೂಪಂ ಬಸವ ಪ್ರಭುವೇ

೮೦. ಶರಣನ ಗುದವೆ ನಕಾರಂ
ಶರಣನ ವರ ಗುಹ್ಯ ಪದ ಮಕಾರ ಶಿಕಾರಂ
ಶರಣನ ಪಾಣಿ ವಕಾರಂ
ಶರಣನ ವಾಕು (ವಚನ) ಯಕಾರಂ ಬಸವ ಪ್ರಭುವೇ

೮೧. ಶರಣನ ಗಂಧ ನಕಾರಂ
ಶರಣನ ವರ ರಸವು ರೂಪು ಮಕಾರ ಶಿಕಾರಂ
ಶರಣನ ಪರುಷ (ಸ್ಪರ್ಶ?) ವಕಾರಂ
ಶರಣನ ಶಬ್ದ ಯಕಾರಂ ಬಸವ ಪ್ರಭುವೇ

೮೨. ಶರಣನ ಮೂಗು ನಕಾರಂ
ಶರಣನ ನಾಲಿಗೆ ನೇತ್ರ ಮಕಾರ ಶಿಕಾರಂ
ಶರಣನ ಹೊದಿಕೆ (ಚರ್ಮ) ವಕಾರಂ
ಶರಣನ ಕಿವಿಯು ಯಕಾರಂ ಬಸವ ಪ್ರಭುವೇ

೮೩. ಶರಣನ ಪ್ರಾಣ ನಕಾರಂ
ಶರಣನಪಾನ ವ್ಯಾನ ಮಕಾರ ಶಿಕಾರಂ
ಶರಣನುದಾನ ವಕಾರಂ
ಶರಣನ ಸಮಾನ ಯಕಾರ ಬಸವ ಪ್ರಭುವೇ

೮೪. ಶರಣನ ಚಿತ್ತ ನಕಾರಂ
ಶರಣನ ಮತಿ ಹಂಕೃತಿಯು ಮಕಾರ ಶಿಕಾರಂ
ಶರಣನ ಮನವು ವಕಾರಂ
ಶರಣನ ತಿಳಿವು ಯಕಾರಂ ಬಸವ ಪ್ರಭುವೇ

೮೫. ಶರಣನ ಕರ್ಮ ನಕಾರಂ
ಶರಣನ ವಿಷಯೇಂದ್ರಿಯುವೆ ಮಕಾರ ಶಿಕಾರಂ
ಶರಣನ ವಾಯು ವಕಾರಂ
ಶರಣನ ಕರಣಂ ಯಕಾರ ಬಸವ ಪ್ರಭುವೇ

## ೧೮. ಪಂಚಾಕ್ಷರಿಯ ಮಿಶ್ರಪಂಚೀಕರಣ.

೮೬. ಶರಣನ ಪಾಯು ನಕಾರಂ
ಶರಣನ ಗಂಧಘ್ರಾಣ ಮಕಾರ (ಮೂರ್ಣ?) ಶಿಕಾರಂ
ಶರಣನ ಅಸುವೆ ವಕಾರಂ
ಶರಣನ ಚಿತ್ತ ಯಕಾರ ಬಸವ ಪ್ರಭುವೇ

೮೭. ಶರಣನ ಗುಹ್ಯ ನಕಾರಂ
ಶರಣನ ಮರಸ ಜಿಹ್ವೆ ಮಕಾರ ಶಿಕಾರಂ
ಶರಣನಪಾನ ವಕಾರಂ
ಶರಣನ ಬುದ್ಧಿಯು ಯುಕಾರ ಬಸವ ಪ್ರಭುವೇ

೮೮. ಶರಣನ ಪಾದ ನಕಾರಂ
ಶರಣನ ರೂಪಂ ನೇತ್ರ ಮಕಾರ ಶಿಕಾರಂ
ಶರಣ ವ್ಯಾನ ವಕಾರಂ
ಶರಣನ ಅಹಮಿಕೆ (ಹಮ್ಮು) ಯಕಾರ ಬಸವ ಪ್ರಭುವೇ

೮೯. ಶರಣನ ಪಾಣಿ ನಕಾರಂ
ಶರಣನ ಸ್ಪರ್ಶ (ಪರುಷವು) ಚರ್ಮ ಮಕಾರ (ಮೂರ್ಣ?) ಶಿಕಾರಂ
ಶರಣನ ಉದಾನ ವಕಾರ
ಶರಣನ ಮನವು ಯುಕಾರಂ ಬಸವ ಪ್ರಭುವೇ

೯೦. ಶರಣನ ವಾಕು ನಕಾರಂ
ಶರಣನ ಶಬ್ದ ಶ್ರೋತ್ರ ಮಕಾರ ಶಿಕಾರಂ
ಶರಣನ ಸಮಾನ ವಕಾರ
ಶರಣನ ಅರಿವು ಯಕಾರಂ ಬಸವ ಪ್ರಭುವೇ

೯೧. ಶರಣನ ಕರ್ಣವು ಮನನಂ
ಶರಣನ ವರ ತೃಪ್ತಿ ಹೃದಯ 'ಪಂಚಕ ಮಾರುತಂ'(ಸಲಿಸ್ವೈರಂಭಂ)
ಶರಣನ ಸದ್ಭಾವವು ಸಹ
ವರ ಮೂಲ ಮಂತ್ರ ರೂಪಂ ಬಸವ ಪ್ರಭುವೇ

೯೨. ಶರಣನ ಸರ್ವಾಂಗದೊಳಂ
ಹರಣ ಮಯವಾದ ಪಂಚೀಕರಣಂಗಳು ತಾಂ
ಗುರು ಕರುಣದಿಂದ ಪಂಚಾ
ಕ್ಷರಿ ಮಯಮಾದುವಯ್ಯಾ ಬಸವ ಪ್ರಭುವೇ

## ೧೯. ಭಕ್ತನ ಅಂಗವು ಲಿಂಗಮಯ.

೯೩. ಭಕ್ತನ ಸರ್ವಾಂಗದೊಳಂ
ಭಕ್ತಿಹಿತವಾಗಿ ಪರಶಿವಲಿಂಗವಿರುತ್ತಂ
ಮುಕ್ತಿಸ್ವರೂಪವಾಗಿಹ
ಯುಕ್ತಿಯ ನಾನೇನ ಪೇಳ್ವೆ ಬಸವ ಪ್ರಭುವೇ

೯೪. ಭಕ್ತನ ಚಿತ್ತಾಚಾರಂ
ಭಕ್ತನ ವರ ಬುದ್ಧಿ ಹಮ್ಮು ಗುರು ಶಿವ ಲಿಂಗಂ
ಭಕ್ತನ ಸುಮನಂ ಜಂಗಮ
ಭಕ್ತನ ಅರಿವು ಪ್ರಸಾದ ಬಸವ ಪ್ರಭುವೇ

೯೫. ಭಕ್ತನ ಪ್ರಾಣಾಚಾರಂ
ಭಕ್ತನಪಾನ ವ್ಯಾನಂ ಗುರು ಶಿವ ಲಿಂಗಂ
ಭಕ್ತನುದಾನವೆ ಜಂಗಮ
ಭಕ್ತನ ಸಮಾನ ಪ್ರಸಾದ ಬಸವ ಪ್ರಭುವೇ

೯೬. ಭಕ್ತನ ಮೂಗಾಚಾರಂ
ಭಕ್ತನ ನಾಲಿಗೆ ನೇತ್ರಂ ಗುರು ಶಿವ ಲಿಂಗಂ
ಭಕ್ತನ ಗಾತ್ರವು ( ತ್ವಕ್ಕು ) ಜಂಗಮ
ಭಕ್ತನ ಕಿವಿಯು ಪ್ರಸಾದ ಬಸವ ಪ್ರಭುವೇ

೯೭. ಭಕ್ತನ ಗಂಧಾಚಾರಂ
ಭಕ್ತನ ರಸವುಂ ರೂಪಂ ಗುರು ಶಿವ ಲಿಂಗಂ
ಭಕ್ತನ ಸ್ಪರ್ಶವು (ಪರುಷವು) ಜಂಗಮ
ಭಕ್ತನ ಶಬ್ದ ಪ್ರಸಾದ ಬಸವ ಪ್ರಭುವೇ

೯೮. ಭಕ್ತನ ಗುದವಾಚಾರಂ
ಭಕ್ತನ ಗುಹ್ಯವು ಪಾದಂ ಗುರು ಶಿವ ಲಿಂಗಂ
ಭಕ್ತನ ಅಸುವೃರಿ ಜಂಗಮ
ಭಕ್ತನ ವಾಕ್ (ವಚನ) ಪ್ರಸಾದ ಬಸವ ಪ್ರಭುವೇ

## ೨೦. ಮಿಶ್ರ ಅಂಗ ಲಿಂಗ ಸಂಗ.

೯೯. ಭಕ್ತನ ಗುದವಾಚಾರಂ
ಭಕ್ತನ ವರ ಗಂಧ ಮೂಗು ಗುರು ಶಿವ ಲಿಂಗಂ
ಭಕ್ತನ ಅಸುವೆ ಸು ಜಂಗಮ
ಭಕ್ತನ ಚಿತ್ತ ಪ್ರಸಾದ ಬಸವ ಪ್ರಭುವೇ

೧೦೦. ಭಕ್ತನ ಗುಹ್ಯಾಚಾರಂ
ಭಕ್ತನ ವರ ರಸವು ಜಿಹ್ವೆ ಗುರು ಶಿವ ಲಿಂಗಂ
ಭಕ್ತನಪಾನವು ಜಂಗಮ
ಭಕ್ತನ ಬುದ್ಧಿ ಪ್ರಸಾದ ಬಸವ ಪ್ರಭುವೇ

೧೦೧. ಭಕ್ತನ ಪದವಾಚಾರಂ
ಭಕ್ತನ ವರ ರೂಪು ನೇತ್ರ ಗುರು ಶಿವ ಲಿಂಗಂ
ಭಕ್ತ ವ್ಯಾನವು ಜಂಗಮ
ಭಕ್ತನ ಹಮ್ಮು ಪ್ರಸಾದ ಬಸವ ಪ್ರಭುವೇ

೧೦೨. ಭಕ್ತನ ಹಸ್ತಾಚಾರಂ
ಭಕ್ತನ ಪರುಷ (ಸ್ಪರ್ಶ) ತ್ವಕ್ಕುಂ ಗುರು ಶಿವ ಲಿಂಗಂ
ಭಕ್ತನ ಉದಾನ ಜಂಗಮ
ಭಕ್ತನ ಮನ ಸುಪ್ರಸಾದ ಬಸವ ಪ್ರಭುವೇ

---

೧೦೦. ಗುಹ್ಯ + ಆಚಾರಂ ಇಲ್ಲಿ ಆಕಾರ ಲೋಪ.

೧೦೩. ಭಕ್ತನ ವಾಕ್ಯಾಚಾರಂ
ಭಕ್ತನ ಶಬ್ದ ಶ್ರೋತ್ರವು ಗುರು ಶಿವ ಲಿಂಗಂ
ಭಕ್ತನ ಸಮಾನ ಜಂಗಮು
ಭಕ್ತನ ತಿಳಿವು (ಜ್ಞಾನ) ಪ್ರಸಾದ ಬಸವ ಪ್ರಭುವೇ

೧೦೪. ಭಕ್ತನ ಕರ್ಮಾಚಾರಂ
ಭಕ್ತನ ಪರ ವಿಷಯ ವಿಂದ್ರಿ ಗುರು ಶಿವ ಲಿಂಗಂ
ಭಕ್ತನ ಪುರುಷವು ಜಂಗಮು
ಭಕ್ತನ ಕರಣ ಪ್ರಸಾದ ಬಸವ ಪ್ರಭುವೇ

೧೦೫. ಭಕ್ತನ ಕರ್ಮದ ವಾಸನಂ
ಭಕ್ತನ ತೃಪ್ತಿಯು ಹೃದಯಂ ಪಂಚಕ ಮರುತಂ(ಸಲಿಪ್ತೈರಂಭಂ)
ಭಕ್ತನ ಭಾವದ ಸಮರಸ
ಮುಕ್ತಿಯು ಮಹಲಿಂಗ ತಾನೆ ಬಸವ ಪ್ರಭುವೇ

೩೧. ಷಡಕ್ಷರದ ೮ ಬಗೆಯ ಸಂಬಂಧ (ಸಕೀಲ)

೧೦೬. ನಿರುಪಮ ಭಕ್ತ ಮಹೇಶನು
ಚಿರ ಸುಪ್ರಸಾದಿ ಪ್ರಾಣದ ಲಿಂಗಿಯು ಶರಣಂ
ಪರಮ ನಿಜೈಕ್ಯ ಷಡಂಗಂ
ಉರಿಯಾರಕ್ಷರದ ರೂಪ ಬಸವ ಪ್ರಭುವೇ

೧೦೭. ಅನುಪಮದ ಕ್ರಿಯೆ ಗುರು ಶಿವ
ಚಿನುಮಯ ಜಂಗಮ ಪ್ರಸಾದವುರೆ ಮಹಲಿಂಗಂ
ಸನುಮತ ಷಡ್ವಿಧ ಲಿಂಗಂ
ಘನದಾರಕ್ಷರದ ರೂಪ ಬಸವ ಪ್ರಭುವೇ

---

೧೦೩. ಭಕ್ತನಲ್ಲಿರುವ ಸಮಾನ ವಾಯುವು ಜಂಗಮಲಿಂಗ.

೧೦೫. ಕರ್ಮೇಂದ್ರಿಯದ ೬ನೆಯದು ಮನನ. ವಿಷಯದ ಆರನೆಯದು ತೃಪ್ತಿ. ಆರನೆಯ ಜ್ಞಾನೇಂದ್ರಿಯವು ಹೃದಯ. ಆ ನೆಯ ವಾಯು ಸ್ಪೈರಂಭ. ಆರನೆಯ ಕರಣವು ಭಾವ.

೧೦೭. ಕ್ರಿಯೆ = ಆಚಾರಲಿಂಗ

೧೦೮. ಸುರುಚಿರ ಕ್ರಿಯಾಜ್ಞಾನಂ
ಚಿರಮಿಚ್ಛೆ ಆದಿ ಪರ ಚಿಚ್ಛಕ್ತಿ ಇವೆಲ್ಲಂ
ನಿರುಪಮ ಷಡ್ವಿಧ ಶಕ್ತಿಯು
ಉರೆಯಾರಕ್ಷರದ ರೂಪ ಬಸವ ಪ್ರಭುವೇ

೧೦೯. ಮನ ಶ್ರದ್ಧೆ ನಿಷ್ಠೆಯುರೆ ಅವ
ಧಾನವು ಅನುಭವವಾನಂದ ಸಮರಸವಿವುಗಳ್
ಚಿನುಮಯ ಷಡ್ವಿಧ ಭಕ್ತಿಯು
ಘನದಾರಕ್ಷರದ ರೂಪ ಬಸವ ಪ್ರಭುವೇ

೧೧೦. ಪರಮ ಸುಚಿತ್ತ ಸುಬುದ್ಧಿಯು
ನಿರಹಂಕಾರ ಸುಮನ ಸುಜ್ಞಾನ ಸುಭಾವಂ
ನಿರುಪಮ ಷಡ್ವಿಧ ಹಸ್ತವು
ಉರೆಯಾರಕ್ಷರದ ರೂಪ ಬಸವ ಪ್ರಭುವೇ

೧೧೧ ಅನುಪಮ ಮೂಗುಂ ನಾಲಿಗೆ
ಚಿನುಮಯ ಸುನೇತ್ರ ಚರ್ಮ (ಗಾತ್ರ) ವು ಶ್ರೋತ್ರಂ ಹೃದಯಂ
ಸನುಮತ ಷಡ್ವಿಧ ಮುಖವಿವು
ಘನದಾರಕ್ಷರದ ರೂಪ ಬಸವ ಪ್ರಭುವೇ

೧೧೨ ನಿರುತದ ಗಂಧವು ರಸವುಂ
ಚಿರರೂಪ ಪರುಷ ಘನಮಹ ತೃಪ್ತಿ ಶಬ್ದಂ
ಸುರುಚಿರ ದಾರು ಪದಾರ್ಥಂ
ಉರೆಯಾರಕ್ಷರದ ರೂಪ ಬಸವ ಪ್ರಭುವೇ

೧೧೩. ಪರಮ ಸುಗಂಧಂ ಸುರಸಂ
ಮೆರೆವ ಸುರೂಪಂ ಸೋಂಕು ತೃಪ್ತಿಯು ಶಬ್ದಂ
ಉರೆ ವಿಷಯುಗಳಿವೆ ಶೇಷಂ
ನೆರೆಯಾರಕ್ಷರ ರೂಪಂ ಬಸವ ಪ್ರಭುವೇ

---

೧೧೩. ವಿಷಯುವನ್ನು ಲಿಂಗಕ್ಕೆ ಅರ್ಪಣೆ ಮಾಡಿದರೆ ಅದೇ ಹೆಸರಿನ ಪ್ರಸಾದವಾಗುವುದು. ಇಲ್ಲಿ ಶಬ್ದವಾದಮೇಲೆ ತೃಪ್ತಿ ವಿಷಯು.

೧೧೪. ಆರಂಗಲಿಂಗ ಶಕ್ತಿಯು
ಆರಾದ ಭಕ್ತಿ ಕರಮುಖ ವಿಷಯ ಪ್ರಸಾದಂ
ಆರವು (ಆರರ) ಎಂಟಹ ಸಕೀಲ
ಆರಕ್ಷರದ ರೂಪ ಬಸವ ಪ್ರಭುವೇ

### ೨೨. ಆರಕ್ಷರವ ೪೮ ವಿಧ ಸಂಬಂಧ (ಸಕೀಲ)

೧೧೫. ವರ ಗೂಢಂ ಶರೀರಸ್ಥಂ
ವರ ಲಿಂಗ ಕ್ಷೇತ್ರವನಾದಿವತು ಮಹತ್ತ್ರೇ
ಸುರುಚಿರ ಷಡ್ವಿಧ ಸಂಜ್ಞೆಯು
ನೆರೆಯಾರಕ್ಷರ ರೂಪಂ ಬಸವ ಪ್ರಭುವೇ

೧೧೬. ಸತ್ತುವು ಚಿತ್ತಾನಂದಂ
ನಿತ್ಯವು ಪರಿಪೂರ್ಣಾಖಂಡಮಯವೆನಿಸಿರ್ಪ
ಅತ್ಯಧಿಕದಾರು ಲಕ್ಷಣ
ಉತ್ತಮ ಷಣ್ಮಂತ್ರ ರೂಪ ಬಸವ ಪ್ರಭುವೇ

೧೧೭. ಅನುಪಮ ಸುಕರ್ಮ ಕರ್ತೃವು
ಚಿನುಮಯಮೂರ್ತಿ ಅಮೂರ್ತಿ ಶಿವಂ ಮಹಪೆಂಬಾ
ಅನಘ ಸು ಸಾದಾಖ್ಯಂಗಳು
ಘನವಾರಕ್ಷರದ ರೂಪು ಬಸವ ಪ್ರಭುವೇ

೧೧೮. ಅಂತೆಯೆ ನಿವೃತ್ತಿ ಪ್ರತಿಷ್ಠೆ
ಸಂತ ಸು ವಿದ್ಯೆಯು ಶಾಂತಿಯು ಅತೀತೆ ಇವು ಮೇಣ್
ಶಾಂತಾತೀತೋತ್ತರ ಕಲೆ
ಮಂತ್ರದ ಸಂಬಂಧವಾರು ಬಸವ ಪ್ರಭುವೇ

೧೧೯. ವರ ಋಕ್ಕು ಯಜುಸ್ಸಾಮಾ
ಥರ್ವಣವು ಅಜಪೆ ಗಾಯತ್ರಿ ಎಂಬಿವೆಲ್ಲಂ
ಸುರುಚಿರ ಷಡ್ವಿಧ ವೇದಂ
ಉರೆಯಾರಕ್ಷರದ ರೂಪ ಬಸವ ಪ್ರಭುವೇ

೧೨೦. ಪೀತಶ್ವೇತವು ಹರಿತಂ
ಓತು ಸು ಮಾಂಜಿಷ್ಠ ಕಪೋತವು ಮಾಣಿಕ್ಯಂ
ಈ ತೆರದ ಆರು ವರ್ಣವು
ಖ್ಯಾತಿಯು ಷಣ್ಮಂತ್ರ ರೂಪ ಬಸವ ಪ್ರಭುವೇ

೧೨೧. ತಥ್ಯವಿನೆನಿಸುತೆ ತೋರುವ
ಪೃಥ್ವಿಯು ಜಲ ತೇಜ ಮರುತ ಗಗನಾತ್ಮಗಳೇ
ನಿತ್ಯವಹ ಆರು ಭೂತಂ
ಸತ್ಯದ ಷಣ್ಮಂತ್ರ ರೂಪ ಬಸವ ಪ್ರಭುವೇ

೧೨೨. ಸದಮಲ ಬ್ರಹ್ಮಂ ವಿಷ್ಣುವು
ವಿದಿತಂ ರುದ್ರೇಶ್ವರ ಸದಾಶಿವ ಶಿವರೇ
ಒದವಿದ ಆರಧಿ ದೈವವು
ಚಿರ ಷಣ್ಮಂತ್ರದ ರೂಪ ಬಸವ ಪ್ರಭುವೇ

೧೨೩. ಈ ಮಂತ್ರವು ಶಾಸ್ತ್ರಕ್ಕಂ
ಈ ಮಂತ್ರವು ಪುರಾಣಕ್ಕಂ ನಿಲುಕದೆ ಇಹುದೈ
ಈ ಮಂತ್ರವು ತರ್ಕಕ್ಕಂ
ಈ ಮಂತ್ರ ಶೃತಿಗೆ ನಿಲುಕದು ಬಸವ ಪ್ರಭುವೇ

೧೨೪. ಈ ಮಂತ್ರ ತಪಕೆ ನಿಲುಕದು
ಈ ಮಂತ್ರ ಉಳಿದ ಮಂತ್ರ (ತಂತ್ರ) ಕೆ ನಿಲುಕದೆ ಇಹುದೈ
ಈ ಮಂತ್ರ ಮನಕೆ ನಿಲುಕದು
ಈ ಮಂತ್ರವಚನಕಸಾಧ್ಯ ಬಸವ ಪ್ರಭುವೇ

೧೨೫. ಈ ಮಂತ್ರವೆ ದೀಕ್ಷಾಗುರು
ಈ ಮಂತ್ರವೆ ದುರಿತ ದೋಷಕೆ ಶಿಕ್ಷಾಗುರುವೈ
ಈ ಮಂತ್ರವೆ ಮೋಕ್ಷದ ಗುರು
ಈ ಮಂತ್ರ ಗುರುವಿನ ಮೂಲ ಬಸವ ಪ್ರಭುವೇ

೧೨೬. ಈ ಮಂತ್ರ ವಿಷ್ಟಲಿಂಗಂ
ಈ ಮಂತ್ರವೆ ಶಿವಶರಣನ ಹರಣದ ಲಿಂಗಂ
ಈ ಮಂತ್ರ ಭಾವಲಿಂಗಂ
ಈ ಮಂತ್ರ ಲಿಂಗ ಮೂಲ ಬಸವ ಪ್ರಭುವೇ

೧೨೭. ಈ ಮಂತ್ರವು ದೀಕ್ಷಾಜಲ
ಈ ಮಂತ್ರ ಪರಮ ಪಾವನ ಶಿಕ್ಷಾ ಜಲವೈ
ಈ ಮಂತ್ರ ಮೋಕ್ಷ ವಾರಿಯು
ಈ ಮಂತ್ರ ಪದಜಲ ಮೂಲ ಬಸವ ಪ್ರಭುವೇ

೧೨೮. ಈ ಮಂತ್ರ ಸ್ವಯಜಂಗಮ
ಈ ಮಂತ್ರ ಲೋಕಪಾವನ ಚರ ಜಂಗಮವೈ
ಈ ಮಂತ್ರ ಪರ ಜಂಗಮ
ಈ ಮಂತ್ರ ಚರದ ಮೂಲಂ ಬಸವ ಪ್ರಭುವೇ

೧೨೯. ಈ ಮಂತ್ರ ಶುದ್ಧ ಶೇಷವು
ಈ ಮಂತ್ರ ತೃಪ್ತಿಯಹ ಸಿದ್ಧ ಪ್ರಸಾದಂ
ಈ ಮಂತ್ರವೆ ಪ್ರಸಿದ್ಧಂ
ಈ ಮಂತ್ರವೆ ಶೇಷ ಮೂಲ ಬಸವ ಪ್ರಭುವೇ

೧೩೦ ಈ ಮಂತ್ರವೆ ಕ್ರಿಯೆ ಭಸಿತವು
ಈ ಮಂತ್ರವೆ ಪರಮ ಪಾವನ ಜ್ಞಾನದ (ತಿಳಿವಿನ) ಭಸ್ಮಂ
ಈ ಮಂತ್ರ ನಿಜ ಪರ ಭಸಿತ
ಈ ಮಂತ್ರ ಭಸಿತ ಮೂಲಂ ಬಸವ ಪ್ರಭುವೇ

೧೩೧. ಈ ಮಂತ್ರ ಕ್ರಿಯೆ ಶಿವಾಕ್ಷಿ (ರುದ್ರಾಕ್ಷಿ)
ಈ ಮಂತ್ರವು ಪಾವನ ಚಿಚ್ಛಿವಾಕ್ಷಿಯುಹುದೈ
ಈ ಮಂತ್ರ ಪರ ಶಿವಾಕ್ಷಿಯು
ಈ ಮಂತ್ರವಕ್ಷ ಮೂಲಂ ಬಸವ ಪ್ರಭುವೇ

---

೧೩೦. ನಿಜಪರಭಸಿತ = ನಿಜಚಿದ್ಭಸ್ಮ
೧೩೧. ಚಿಚ್ಛಿವಾಕ್ಷಿ = ಜ್ಞಾನರುದ್ರಾಕ್ಷಿ

೧೩೨. ಈ ಮಂತ್ರ ಕ್ರಿಯೆಮಂತ್ರಂ
ಈ ಮಂತ್ರ ಅವಿರಳಪೂರ್ವ ತಿಳಿವಿನ(ಜ್ಞಾನದ) ಮಂತ್ರಂ
ಈ ಮಂತ್ರವೆ ನಿಜಮಂತ್ರಂ
ಈ ಮಂತ್ರವೆ ಮಂತ್ರಮೂಲ ಬಸವ ಪ್ರಭುವೇ

೧೩೩. ಗುರ ಲಿಂಗ ಜಪ ಪದೋದಕ
ಪರಮ ಪ್ರಸಾದ ಭಸಿತಂ ರುದ್ರಾಕ್ಷಿಯು ಮೇಣ್
ಚಿರಮಂತ್ರ ವಿವೆಂಟಿಹ ಅ।
ಪರಣವೆ ಷಣ್ಮಂತ್ರವಯ್ಯ ಬಸವ ಪ್ರಭುವೇ

೧೩೪. ಈ ಮಂತ್ರಯುಕ್ತಿ ಮೂಲಂ
ಈ ಮಂತ್ರ ವೀರಶೈವ ವಿರಕ್ತಿಗೆ ಮೂಲಂ
ಈ ಮಂತ್ರ ಭಕ್ತಿ ಮೂಲಂ
ಈ ಮಂತ್ರವೆ ಮುಕ್ತಿಮೂಲ ಬಸವ ಪ್ರಭುವೇ

೧೩೫ ಈ ಮಂತ್ರವೆ ಚಿಂತಾಮಣಿ
ಈ ಮಂತ್ರ ಕಲ್ಪತರುವಾಗಮುದಗ್ರಣಿಯೈ
ಈ ಮಂತ್ರವೆ ಪರುಷದ ಕಣಿ
ಈ ಮಂತ್ರವೆ ಪದಕೆ ಹೊಣೆಯು ಬಸವ ಪ್ರಭುವೇ

೧೩೬. ಈ ಮಂತ್ರವೆ ಕಾಮಧೇನು
ಈ ಮಂತ್ರವೆ ಅಜ್ಞಾನ ತಮಕೆ ಚಿದ್ರವಿಯೈ
ಈ ಮಂತ್ರ ಕುರುಹಿನ ಕೂನ (ಅಂಕ)
ಈ ಮಂತ್ರವೆ ಪರುಷವಹುದು ಬಸವಪ್ರಭುವೇ

೧೩೭. ಈ ಮಂತ್ರ ಮೂರ್ತಿಬೊಮ್ಮಂ
ಈ ಮಂತ್ರ ಪಿಂಡಕಲೆಯಾನಂದದ ಬೊಮ್ಮಂ
ಈ ಮಂತ್ರ ವಿಜ್ಞಾನ ಬೊಮ್ಮ
ಈ ಮಂತ್ರವೆ ಪರಬೊಮ್ಮಂ ಬಸವ ಪ್ರಭುವೇ

೧೩೮ ಈ ವೀರಶೈವ ಮಂತ್ರವ
ಅವನು ಕಾಯವು ವಾಙ್ಮನವೀ ಕರಣಗಳಿಂ
ತೀವಿ ನೆರೆ ಜಪಿಸಲಾತನೆ
ಪಾವನ ತರಪರ ಬೊಮ್ಮಂ ಬಸವ ಪ್ರಭುವೇ

೨೪. ಷಡಕ್ಷರ ಮಂತ್ರಕ್ಕೆ ಅನಧಿಕಾರಿ.

೧೩೯. ಇಂತೀ ಚಿದ್ಘನ ಮಂತ್ರವ
ಅಂತಕನ ಬಲೆಯೊಳ್ ಸಿಲ್ಕಿ ನುಸುಳುತ ಸುಖದುಃಖಗಳಿಂ
ಚಿಂತೆಯೊಳು ತೊಳಲಿ ಬಳಲುವ
ಭ್ರಾಂತ ಜನಕರುಹಲಾಗದು ಬಸವ ಪ್ರಭುವೇ

೧೪೦ ಕಾಮದ ಕಳವಳದಿಂ ಪರ
ಕಾಮಿನಿಯ ಸಂಗಕೆಳಸುತ್ತಿಹ ಮನಃಜರಿಗುಂ
ತಾಮಸ ಬುದ್ಧಿಯ ಜನರಿಗೆ
ಈ ಮಂತ್ರ ವರುಹಲಾಗದು ಬಸವ ಪ್ರಭುವೇ

೧೪೧. ಭಿನ್ನದ ಬೋಧೆಯ ಶಾಸ್ತ್ರವ
ನನ್ನಿ ನಿಜವೆಂದು ಓದಿ ನಡೆಯೆ ಭವ 'ವಶ್ಯಂ' (ಬರ್ಕೆಂ)
ತನ್ನ ನಿಜವರಿದ ಮೂಢಗೆ
ಚಿನ್ಮಂತ್ರವರುಹಲಾಗದು ಬಸವ ಪ್ರಭು ವೇ

೧೪೨. ಜಿನುಗಿ ದುರಾಶೆಗೆ ಅನ್ಯರ
ಧನವನು ಕಳವಿಂದಂ ನೆರೆಯಪಹರಿಸುವ ದು
ರ್ಮನದ ದುರಾತ್ಮ ಜನರಿಗೆ
ಘನಮಂತ್ರವರುಹಲಾಗದು ಬಸವಪ್ರಭುವೇ

೧೪೩. ಕರತಳದ ಲಿಂಗವಿರ್ದುಂ
ಪರದೈವ ಗುಡಿಯ ಮೂರ್ತಿಗೆ ಕೈ ಮುಗಿಯುತ್ತುಂ
ವರ ಪಡೆವ ಲೋಕ ಜನರಿಗೆ
ಗುರು ಮಂತ್ರ ಒರೆಯಲಾಗದು ಬಸವ ಪ್ರಭುವೇ

೧೪೪. ಶಿಷ್ಯಯು ಗುರುವಿಗೆ ತಾನೇ
ಅನ್ನಿಯದಿ ಬಗುಳಿ ಪಿಂಗಡೆ (ಹಿಂದೆಯೆ) ನಿಂದೆಯ ಮಾಳ್ಪ
ಕುನ್ನಿ ಮನ.ಜರಿಗೆ ಈ ನಿಜ
ಚಿನ್ಮಂತ್ರ ಉಸುರಲಾಗದು ಬಸವ ಪ್ರಭುವೇ

೧೪೫. ಉರೆಯಾರಕ್ಷರ ಮಂತ್ರವ
ಪರಧನ ಸತಿ ಪರದೈವಕೆಳಸಿ ಪರನಿಂದೆಯುನಂ
ಉರವಣಿಸಿ ಮಾಡುವವರಿಗೆ
ಮರೆದೊಮ್ಮೆ ಅರುಹಲಾಗದು ಬಸವಪ್ರಭುವೇ

೨೫. ಷಡಕ್ಷರ ಮಂತ್ರಕ್ಕೆ ಅಧಿಕಾರಿ

೧೪೬. ಗುರು ಹಿರಿಯರುಗಳು ನೊಂದರೆ
ನೆರೆ ತನ್ನ ನೋವೆನುತ ತಾಂ ನಡೆನುಡಿಯಿಂದಂ
ಪರಮ ಸದುಭಕ್ತನಾದರೆ
ನೆರೆಯಾರಕ್ಷರವನುಸುರು ಬಸವ ಪ್ರಭುವೇ

೧೪೭. ಮಿಥ್ಯನ್ಯಾಯಕ್ಕೆಳಸದೆ
ತಥ್ಯದ (ಸತ್ಯದ) ನುಡಿಯಿಂ ಸುನ್ಯಾಯುವ ಹೇಳುತ್ತಂ
ಉತ್ತಮದ ಭಕ್ತನಾದರೆ
ಸತ್ಯದ ಷಣ್ಮಂತ್ರವರುಹು ಬಸವ ಪ್ರಭುವೇ

೧೪೮. ಅಂಗಜನಪಟ್ಟಳಿ ಹಿಂಗಿಸಿ
ಲಿಂಗದ ನೆನಹಿಂ ತನ್ನಂಗನೆಯುಂ ನೆರೆವಾ
ಮಂಗಲಕರ ಸದ್ಭಕ್ತಗೆ
ಹಿಂಗದೆ ಷಣ್ಮಂತ್ರವರುಹು ಬಸವ ಪ್ರಭುವೇ

೧೪೯. ಧನಧಾನ್ಯವುಳ್ಳ ಕಾಲದಿ
ಅನವರತ ದಾನಧರ್ಮವ ಪರೋಪಕೃತಿಯುಂ
ವಿನಯದಿ ಮಾಡುವ ಭಕ್ತಗೆ
ಘನದಿಂ ಷಣ್ಮಂತ್ರವರುಹು ಬಸವ ಪ್ರಭುವೇ

೧೫೦. ಗುರುವಿನ ಪಾದವ ಕಾಣುತ
ಗುರುಶುಶ್ರೂಷೆ ಶ್ರೀ ಗುರುಸೇವೆಯು ಮಾಳ್ಪ
ಗುರುನಿಷ್ಠೆಯುಳ್ಳ ಭಕ್ತಗೆ
ವರದ ಷಡಕ್ಷರಿಯುನರುಹು ಬಸವ ಪ್ರಭುವೇ

೧೫೧. ಅನ್ಯವಹ ದೈವಕೆರಗದೆ
ತನ್ನಿಷ್ಟಲಿಂಗ ಒಂದನೆ ಭಜನೆಯು ಮಾಳ್ಪ
ಚನ್ನ ಸದುಕ್ರಿಯೆ ಭಕ್ತಗೆ
ಚಿನ್ಮೂಲದ ಮಂತ್ರ ವರುಹು ಬಸವ ಪ್ರಭುವೇ

೧೫೨. ತಾನೇ ತಾನಹ ಚಿದ್ಘನ
ಜ್ಞಾನದ ಜಂಗಮ ದಾಸೋಹವ ಮಾಡುವ ಸು
ಮ್ಮಾನ ನಿಧಿ ಭಕ್ತನಾದರೆ
ನೀನುರೆ ಷಣ್ಮಂತ್ರವರುಹು ಬಸವ ಪ್ರಭುವೇ

೧೫೩ ಎದದ ತೀರ್ಥವ ಕಾಣುತ
ಐದುತೆ ಸಾಷ್ಟಾಂಗವೆರಗಿ ತೀರ್ಥವ ಲಿಂ
ಗೋದದ ಭಕ್ತಂಗಾದರೆ
ಆದಿಯ ಷಣ್ಮಂತ್ರ ವರುಹು ಬಸವ ಪ್ರಭುವೇ

೧೫೪. ಅನ್ಯೋಚ್ಛಿಷ್ಟವ ಮುಟ್ಟದೆ
ತನ್ನಿಷ್ಟಲಿಂಗ ಮುಖದಿ ಪ್ರಸಾದವನುಂಬಾ
ಸನ್ನುತ ಭಕ್ತನ ಕಂಡರೆ
ಚಿನ್ನಹ ಷಣ್ಮಂತ್ರ ವರುಹು ಬಸವ ಪ್ರಭುವೇ

೧೫೫. ಗುರುಭಕ್ತ ಲಿಂಗ ಪೂಜೆಯು
ಸ್ಥಿರಚರ ಪರದಾಸೋಹ ಪದ ಜಲ ಪ್ರಸಾದವಕೊಂಬಾ
ಪರಿಚರಿಯ ಭಕ್ತನಾದರೆ
ವರದ ಷಡಕ್ಷರಿಯ ನರುಹು ಬಸವ ಪ್ರಭುವೇ

## ೨೬. ಗುರು ಕರುಣವನ್ನು ಗ್ರಹಿಸುವುದು, (ದೀಕ್ಷೆ).

೧೫೬. ಗುರು ಕರುಣಾಮೃತ ಶಿಷ್ಯನ
ಚಿರ ಹೃದಯ ಕೂಪದಲಿ ಪೂರ್ಣೀಕರಿಸುತ್ತಂ
ಹೊರಗೊಳಗೆ ಸೂಸಿ ತುಂಬುವ
ಪರಿಯುಂಟಿದೆಂತ ನೋಡಾ ಬಸವ ಪ್ರಭುವೇ

೧೫೭. ಪ್ರಣವದ ಮೂಲವೆ ಪೂರಕ
ಪ್ರಣವದ ಪಂಚಕ ರೇಚಕ ಇವುಳ್ಳ ಭಕ್ತಂ
ಪಣೆಯ ಮಣಿ ದೀಪ್ತಿಯಿಂದಂ
ತ್ರಿಣಯನು ಎಂದೆನಿಸುತಿಹನು ಬಸವ ಪ್ರಭುವೇ

೧೫೮. ಇಂತೀ ಗುರು ಕರುಣದ ವಶ
ಣ್ಮಂತ್ರದ ದೆಸೆಯಿಂ ದಶವಿಧ ಮರುತ ಗಣಂಗಳ್
ಅಂತರಿಸಲಾ ಸುಭಕ್ತನು
ಮಂತ್ರಮಯ ಲಿಂಗವಾದಂ ಬಸವ ಪ್ರಭುವೇ

೧೫೯. ಗುರುವಿನೊಳು ಕರುಣವು ಹುಟ್ಟಿ
ವರ ಶಿಷ್ಯನ ಶಿರದ ಮೇಲೆ ಕರ ಮಡುಗುತ್ತಂ
ಶಿರದರ ಮನೆಯಾ ಕಳೆಯನು
ಕರೆದು ಕರಕಿತ್ತ ನೋಡಾ ಬಸವ ಪ್ರಭುವೇ

೧೬೦. ಆ ಕಳೆಯು ಭಾವಕೆ ತಂದು
ಆ ಕಳೆಯ ಮನಕೆ ತಂದು ಮನದಿಂ ಕಣ್ಣಿಂ
ದಾ ಕಳೆ ತಾನಹ ಲಿಂಗವ
ತಾಂ ಕರಕೆ ಕೊಟ್ಟನಯ್ಯಾ ಬಸವ ಪ್ರಭುವೇ

೧೬೧. ಕರ ಶಿರ ಸಂಯೋಗದೊಳಂ
ಪರಮೇಷ್ಟ ಲಿಂಗವೊಗೆದುದು ಸರ್ವಾಂಗದೊಳಂ
ಪರಿ ಪೂರ್ಣವಾದ ಭೇದವ
ವರ ಶೃತಿ ತಾವರಿಯುವಯ್ಯ ಬಸವ ಪ್ರಭುವೇ

೧೬೨. ಗುರು ಶಿಷ್ಯರ ಸಂಬಂಧವ
ವರ ಶೃತಿ ಶಾಸ್ತ್ರಂಗಳಿಂದ ತಿಳಿಯಲ್ಕರಿದೈ
ಗುರುಕರದೊಳೊಗೆದ ಶಿಷ್ಯನು
ಗುರು ಮುಟ್ಟೆ ಗುರುವೆ ಆಹನು ಬಸವ ಪ್ರಭುವೇ

## ೨೭. ಗುರುವಿನಲ್ಲಿ ಅಷ್ಟಾವರಣ ಸಂಬಂಧ.

೧೬೩. ಗುರುವಿನ ಶಾಂತಿಯು ಭಸಿತವು
ಗುರುವಿನ ಚಿದ್ವದನ ಚೆಲ್ವ ರುದ್ರಾಕ್ಷಗಳೈ
ಗುರುವಿನಭಿಧಾನ ಮಂತ್ರವು
ಗುರುವಿನ ವಿಗ್ರಹವೆ ಲಿಂಗ ಬಸವ ಪ್ರಭುವೇ

೧೬೪. ಗುರುವಾನಂದವು ಪದ ಜಲ
ಗುರು ಪ್ರಸನ್ನತೆ ವರ ಪ್ರಸಾದವು ನೋಡಾ
ಗುರುವಿನ ಹರಣವೆ ಜಂಗಮ
ಗುರುವಿನ ನಿಜ ಪರಬೊಮ್ಮಂ ಬಸವ ಪ್ರಭುವೇ

## ೨೮. ಶಿವ ಸರ್ವಗತ ನಿರಸನ

೧೬೫. ಸಕಲವು ಶಿವನೆಂದೆಂಬರು
ಸಕಲಕೆ ಸುಖ ದುಃಖ ಜನನ ಮರಣಗಳಿಂದಂ
ವಿಕಳತೆ ತೋರುವುದದರಿಂ
ಸಕಲವು ಶಿವನಲ್ಲ ನೋಡು ಬಸವ ಪ್ರಭುವೇ

೧೬೬. ಜೀವನೆ ಶಿವನೆಂದೆಂಬರು
ಜೀವನು ನಿಜ ಹಸಿವು ತೃಷೆ ವ್ಯಸನಗಳಿಂದಂ
ಬೇವುತ ಸಾವುತಲಿರ್ಪನು
ಜೀವನು ಶಿವನಲ್ಲ ನೋಡು ಬಸವ ಪ್ರಭುವೇ

೧೬೭. ಮನ ತಾ ಘನವೆಂದೆಂಬರು
ಮನ ಮರವೆಯಿಂದ ಮಾಯಾವಶವಾಗುತ್ತಂ
ಘನ ದುಃಖ ಪಡುತಲಿರ್ಪುದು
ಮನ ತಾ ಘನವಲ್ಲ ನೋಡು ಬಸವ ಪ್ರಭುವೇ

೧೬೮. ಸರ್ವವು ಶಿವನೆಂದೆಂಬರು
ಒರ್ವರಿಗೊರ್ವರು ಕಲಹದಿ ಸೋಲ್ ಗೆಲವಿಂದಂ
ಗರ್ವಮಯರಾಗಿ ತೋರ್ಪರು
ಸರ್ವವು ಶಿವನಲ್ಲ ನೋಡು ಬಸವ ಪ್ರಭುವೇ

೧೬೯. ಹುಸಿಯು ಕಳವು ಪರದಾರಾ
ನುಸುಳುಂ ತಾಟಕವು ತಳ್ಳಿ ಡಂಬಕ ಬಿಂಕಂ
ಕಿಸುಕುಳ ಮಾನವರಲ್ಲಿರೆ
ಅಕಮ ಶಿವನಿಲ್ಲ ನೋಡಾ ಬಸವ ಪ್ರಭುವೇ

೧೭೦. ಕಾಮ ಕ್ರೋಧವು ಲೋಭವು
ವ್ಯಾಮೋಹ ದುರ್ಮದವು ಮತ್ಸರಪಿವನುಳ್ಳ
ತಾಮಸ ಬುದ್ಧಿಯ ಜನರೊಳು
ಶ್ರೀ ಮಹದೇವನಿಲ್ಲ ಬಸವ ಪ್ರಭುವೇ

೧೭೧. ಪೊಡವಿಯ ಮಣ್ಣಂ ತರುತಂ
ಅಡಗಡಿಗೆ ತುಳಿದು ಗಡಿಗೆ ಗುಡಾಣ ಮಾಡುತ್ತಂ
ಸುಡುವನೆ ಕುಲಾಲನಲ್ಲದೆ
ಗಡಿಗೆಯು ಕುಲಾಲನಲ್ಲಂ ಬಸವ ಪ್ರಭುವೇ

೧೭೨. ಕಳೆಯು ಬಹು ಹಸನ ಮಾಡುತ
ಬಿಳಿಜೋಳ ಉದ್ದು ಕಡಲೆಗಳಂ ಬಿತ್ತುತ್ತಂ
ಬೆಳೆವನು ಒಕ್ಕಲಿಗನಕ್ಕು
ಬೆಳೆ ತಾನೊಕ್ಕಲಿಗನಲ್ಲ ಬಸವ ಪ್ರಭುವೇ

೧೭೩. ಜಗದಾಗು ಹೋಗು ಮಾಡುವ
ಜಗದಾ ಜಂಗುಳಿಯು ಕಾವ ಗೋವಳನಪ್ಪ
ಜಗಪೊಡೆಯನೆ ಶಿವನಲ್ಲದೆ
ಜಗ ತಾಂ ಶಿವನಲ್ಲ ನೋಡು ಬಸವ ಪ್ರಭುವೇ

೧೭೪. ಮನೆಗೆ ಬೆಳಕಾದ ಜ್ಯೋತಿಯು
ಮನೆಯವರ ನಡೆನುಡಿಯೊಳಗೆ ತಾನಿಲ್ಲದವೋಲ್
ಘನ ಪದವ ಬಲ್ಲ ಶರಣನು
ಜನಪದದೊಳಗಿಲ್ಲ ನೋಡು ಬಸವ ಪ್ರಭುವೇ

## ೨೯. ಶಿವನು ಜಗನ್ಮಯ.

೧೭೫. ರವಿಯಾಕಾಶದೊಳಿರುತಿರೆ
ರವಿ ಬೆಳಗು ಭುವನವೆಲ್ಲವ ತುಂಬಿಹ ಪರಿಯೋಲ್
ತವೆ ಸೂಕ್ಷ್ಮರೂಪದೊಳಗಂ
ಶಿವನೆ ಜಗನ್ಮಯನು ನೋಡು ಬಸವ ಪ್ರಭುವೇ

## ೩೦. ಆರು ಸ್ಥಲಗಳು.

೧೭೬. ಗುರು ಭಕ್ತಿ ಭೃತ್ಯಾಚಾರಂ
ಚರ ಲಿಂಗ ಪೊಂದೆಎಂಬ ದಿಟದಿನನವರತಂ
ಪರವು ದಾಸೋಹಿ ಭಕ್ತನು
ಕರೆದೊಡೆ ಓ ಎಂಬ ಶಿವನು ಬಸವ ಪ್ರಭುವೇ

---

೧೭೩—೧೭೪. ಶಿವ ಎಂದರೆ ಕೇವಲ ಸೂಕ್ಷ್ಮವಾದ ನಿರಾಕಾರ ಚೈತನ್ಯವಸ್ತು. ಈ ಸೂಕ್ಷ್ಮಸ್ಥಿತಿಯು ಭೂಮಿ, ಲೌಕಿಕವರ್ತನೆಯ ಮನುಷ್ಯರು, ಮೊದಲಾದವರಲ್ಲಿ ತೋರುವುದಿಲ್ಲವಾದುದರಿಂದ ಅವರು ಶಿವನಲ್ಲವೆಂದು ಇಲ್ಲಿ ಹೇಳಿರುತ್ತಾರೆ ಅದ್ವೈತಿಗಳು 'ನೇತಿಬ್ರಹ್ಮ' ವನ್ನು ಹೇಳಿದಹಾಗೆ. ಆದರೆ ಸರ್ವವೂ ಬ್ರಹ್ಮ ಎಂದು ಅವರು ಹೇಳುವಂತೆ ಪಂಚಭೂತಗಳು ಶಿವನ ಸಾಕಾರರೂಪಗಳಾದ ಸದಾಶಿವಾದಿಗಳೆಂದೂ ಅವಕ್ಕೆ ಸೂಕ್ಷ್ಮರೂಪನಾದ ಶಿವನೇ ಮೂಲನೆಂದೂ ಶಿವಭಕ್ತರು ತಿಳಿಯುತ್ತಾರೆ. ಹೀಗೆ ಶಿವನು ಜಗನ್ಮಯನೆಂದು ಇಲ್ಲಿ ೧೭೫ನೆಯ ಪದ್ಯದಲ್ಲಿ ತೋರಿಸಿದ್ದಾರೆ.

೧೭೭. ಪರ ಧನ ಪರಂದ್ರೈವಕ್ಕಂ
ಪರಸತಿ ಪರನಿಂದೆ ಹಿಂಸೆಗಂ ತಾನೆರಗಂ
ವರ ಲಿಂಗ ನಿಷ್ಠ ಮಾಹೇ
ಶ್ವರನವನೊಳು ಶಿವನಿರುತಿಹ ಬಸವ ಪ್ರಭುವೇ

೧೭೮. ರೂಪಾದಿ ತ್ರಿ ಪದಾರ್ಥವ
ವ್ಯಾಪಕದಿಂ ಲಿಂಗಕಿತ್ತು ಮೂರ್ ಶೇಷಗಳಿಂ
ದೀಪಿಸುವ ಸು ಪ್ರಸಾದಿಯು
ರೂಪಿನೊಳಗಿರ್ಪ ಶಿವ ತಾಂ ಬಸವ ಪ್ರಭುವೇ

೧೭೯. ಪ್ರಾಣಿಯೊಳಗಿರ್ಪ ಲಿಂಗವ
ಪ್ರಾಣಸ್ಥಾನದೊಳಗಿರಿಸಿ ದಶ ವಿಧ ಪವನಂ
ಮಾಣಿಸಿದ ಪ್ರಾಣ ಲಿಂಗಿಯು
ಪ್ರಾಣದೊಳು ಶಿವನಿರುತಿಹನು ಬಸವ ಪ್ರಭುವೇ

೧೮೦. ಪಂಚೇಂದ್ರಿಯ ವಿಷಯದ ಪ್ರ
ಪಂಚವನತಿಗಳೆದು ಲಿಂಗ ಸಂಚನೆ ಅರಿದುಂ
ಸಂಚರಿಸುತಿರ್ಪ ಶರಣನ
ಪಂಚಮುಖಂ ತಾನೆ ಶಿವನು ಬಸವ ಪ್ರಭುವೇ

೧೮೧. ಅರಿಷಡ್ವರ್ಗಾರೂರ್ಮಿಯು
ತೊರೆದಷ್ಟ ವಿಧಾರ್ಚನೆಯು ಫಲವ ನೀಗುತ್ತಂ
ಉರಿ ಕರ್ಪೂರದೊಲೈಕ್ಯನು
ಪರಿಪೂರ್ಣಂ ತಾನೆ ಶಿವನು ಬಸವ ಪ್ರಭುವೇ

೧೮೨. ನಿರುತ ಸದುಭಕ್ತ ಮಾಹೇ
ಶ್ವರ ಸು ಪ್ರಸಾದಿ ಲಿಂಗ ಪ್ರಾಣಿಯು ಶರಣಂ
ಪರಮ ನಿಜೈಕ್ಯ 'ಷಟ್' (೬) ಸ್ಥಲ
ದಿರವೇ ಮಹದೇವ ನೋಡು ಬಸವ ಪ್ರಭುವೇ

---

೧೮೦. ಪಂಚಮುಖಂ = ಐದು ಭೂತಗಳಲ್ಲಿ ಮುಖ್ಯವಾದ ಆಕಾಶತತ್ವವು?

## ೩೧. ಜೀವನ ವ್ಯರ್ಥಕಾಲದ ಸದುಪಯೋಗ.

೧೮೩. ಬಾಲಕ ತನದೊಳಗಾಟದ
ಲೀಲೆಯು ಯೌವನದಿ ಕಾಮ ವಿಕಾರಂ ಮುದುಕಂ
ಕೋಲೂರುವನನುಭಾವದ
ಕಾಲವದಾವಾಗಲಯ್ಯ ಬಸವ ಪ್ರಭುವೇ

೧೮೪. ನರಸುರ ಹರಿಯಜರಾಗಲಿ
ಮರಣವದಾರಿಂಗಾದರು ಬಿಡದದರಿಂದಂ
ಹರಣವಿರುವಾಗ ಸದುಗುರು
ಚರಣದನುಭಾವಿ ಮುಕ್ತನು ಬಸವ ಪ್ರಭುವೇ

## ೩೨. ಭಕ್ತನು ಬಸವೇಶ್ವರನ ರೂಪ.

೧೮೫. ಲಿಂಗವೆ ಜಂಗಮದಂಗಂ
ಜಂಗಮವೆ ಇಷ್ಟಲಿಂಗದ ವರ ಸತ್ಪ್ರಾಣಂ
ಇಂಗಿತವನರಿದ ಭಕ್ತನೆ
ಸಂಗನ ಬಸವಣ್ಣ ನೋಡು ಬಸವ ಪ್ರಭುವೇ

೧೮೬. ಲಿಂಗವೆ ತನ್ನ ಚಿದಂಗಂ
ಜಂಗಮ ತನ್ನಂತರಂಗ ವರಚಿತ್ಪ್ರಾಣಂ
ಸಂಗಿಸಿದನಾದಿ ಭಕ್ತನು
ಸಂಗನ ಬಸವಣ್ಣ ನೋಡು ಬಸವ ಪ್ರಭುವೇ

೧೮೭. ಲಿಂಗವೆ ಘನ ಚಿದ್ಬಿಂದುವು
ಜಂಗಮವೆ ಪರಮ ಪಾವನ ವರ ಚಿನ್ನಾದಂ
ಸಂಗಿಸಲದು ತಾಂ ಚಿತ್ಕಳೆ
ಸಂಗನ ಬಸವಣ್ಣ ನೋಡು ಬಸವ ಪ್ರಭುವೇ

---

೧೮೮. ಅಂತರ= ಒಳಭಾಗ,

೧೪೮. ಅಂಗದ ಆಚಾರ ಲಿಂಗ
ಲಿಂಗದ ಅಂತರವೆ ಪರಮ ಸಮ್ಯಕ್ ಜ್ಞಾನಂ
ಸಂಗಿಸಿದ ಮಹಜ್ಞಾನವೆ
ಸಂಗನ ಬಸವಣ್ಣ ನೋಡು ಬಸವ ಪ್ರಭುವೇ

೩೩. ಭಕ್ತನು ಗುರು ಲಿಂಗ ಜಂಗಮಾದಿಗಳ ಆಧಾರ.

೧೪೯. ಲಿಂಗಕ್ಕೆ ಅಂಗವಿಲ್ಲಂ
ಜಂಗಮಕೆ ಹರಣವಿಲ್ಲದು ಕಾರಣದಿಂ
ಲಿಂಗ ಜಂಗಮಕೆ ಭಕ್ತನು
ಅಂಗ ಪ್ರಾಣಂಗಳಿತ್ತ ಬಸವ ಪ್ರಭುವೇ

೧೫೦. ಭಕ್ತನ ಪ್ರಾಣವೆ ಲಿಂಗಂ
ಭಕ್ತನ ಪರಮಾತ್ಮ ತಾನೆ ಪರ (ಚರ) ಜಂಗಮವೈ
ಭಕ್ತನ ತನುವೇ ಹಸಾದ (ಪ್ರಸಾದ)
ಭಕ್ತನೆ ನಿಜ ಮುಕ್ತ ನೋಡು ಬಸವ ಪ್ರಭುವೇ

೧೫೧, ಭಕ್ತನ ತನುವೇ ಸದ್ಗುರು
ಭಕ್ತನ ಮನ ಮಂತ್ರಲಿಂಗ ಜಂಗಮ ಭಾವಂ
ಭಕ್ತನ ಇರವೇ ಹಸಾದ (ಪ್ರಸಾದ)
ಭಕ್ತನೆ ನಿಜ ಮುಕ್ತ ನೋಡು ಬಸವ ಪ್ರಭುವೇ

೧೫೨. ಭಕ್ತನ ಕರ ಮನ ಭಾವದಿ
ವ್ಯಕ್ತದಲಿಷ್ಟಂ ಪ್ರಾಣಂ ಭಾವಂ ಲಿಂಗಂ
ಮುಕ್ತಿಮಯವಾಗಿ ತೋರುವ
ಭಕ್ತನೆ ನಿಜ ಮುಕ್ತ ನೋಡು ಬಸವ ಪ್ರಭುವೇ

೧೫೩, ಇಂತಪ್ಪ ಭಕ್ತನಿರವನ
ನಂತಂ ಸಾಸಿರ ಜಿಹ್ವಂ ಪೊಗಳಲ್ಕರಿದೈ
ಮುಂತೊಂದಿಹ ನಾಲಿಗೆಯಿಂ
ದೆಂತಾಂ ಪೊಗಳುವೆನು ದೇವ ಬಸವ ಪ್ರಭುವೇ

೧೯೪. ಹರನಿಂದಧಿಕಂ ಸದ್ಗುರು
ಗುರುವಿಂದಧಿಕಂ ಲಿಂಗವು ಲಿಂಗಕ್ಕಧಿಕಂ
ಪರಜಂಗಮವದಕಿಂದಲು
ನಿರುಪಾಧಿಕ ಭಕ್ತನಧಿಕ ಬಸವ ಪ್ರಭುವೇ

## ೩೪. ಭಕ್ತನ ದಾಸೋಹಂಭಾವ

೧೯೫. ಶ್ರೀವೀರಶೈವ ಭಕ್ತನ
ಆವನು ನೆರೆಸೇವೆಯ ಮಾಡುವನಾತಂಗಾಂ
ಸೇವಾನು ಸೇವೆ ಗೆಯ್ವುದ
ದೇವಾ ನೀಂ ಕರುಣಿಸಯ್ಯ ಬಸವ ಪ್ರಭುವೇ

೧೯೬. ಗುರು ಲಿಂಗ ಚರವ ತನುಯು
ಕರ ಮನ ಭಾವದೊಳಗಿಟ್ಟ ವರ ಭಕ್ತಂಗಾಂ
ಚರಣದ ರಕ್ಷೆಯು ಕಾಯವ್ವ
ತೃಣವಂತೆ ಮಾಡಿ ಸಲಹೈ ಬಸವ ಪ್ರಭುವೇ

---

೧೯೪. ಹರನು ಪಾಪ ಪುಣ್ಯಗಳಿಗನುಸಾರವಾಗಿ ಫಲ ಕೊಡುವವನು. ಇದರಿಂದ ಮರಳಿ ಜನ್ಮವಹುದು ಇದಕ್ಕೆ ಬೇಸತ್ತು ನರನು ಗುರುವನ್ನಾಶ್ರಯಿಸಬೇಕು. ಗುರುವು ಲಿಂಗವನ್ನು ಕೊಡುತ್ತಾನೆ ಈ ಲಿಂಗ ಧಾರಣೆಯಾದಮೇಲೆ ಜಂಗಮವನ್ನು ಹೊಂದಿ ಪಾದೋದಕ ಪ್ರಸಾದಗಳನ್ನು ಪಡೆದು ಶಿವರೂಪನಾಗುತ್ತಾನೆ. ಹೀಗೆ ಭಕ್ತನನ್ನು ಉದ್ಧಾರ ಮಾಡುವದಕ್ಕಾಗಿಯೇ. ಜಂಗಮನು ಈ ಲೋಕದಲ್ಲಿ ಅವತರಿಸಿದನು. ಅನಾದಿ ಭಕ್ತನಿಲ್ಲದಿದ್ದರೆ ಜಂಗಮದ ಅವತಾರವಿರುತ್ತಿರಲಿಲ್ಲ. ಈ ಅಭಿಪ್ರಾಯವನ್ನೇ ಈ ಪದ್ಯವು ತಿಳಿಸುತ್ತದೆ. ಶಿಷ್ಯನ ಪಾಪವು ಹೆಚ್ಚಾಗಿರುವಲ್ಲಿ ಗುರುವು ತನ್ನ ಶಿವಪೂಜಾ ಫಲವನ್ನು ಕೊಟ್ಟು ಅದನ್ನು ಕಡಿಮೆ ಮಾಡುತ್ತಾನೆ. ಈ ದೆಸೆಯಿಂದಲೂ ಹರನಿಗಿಂತ ಗುರುವಧಿಕನೆಂಬರು.

೧೯೬. ಗುರುವೇ ತನ್ನ ಹಸ್ತದಲ್ಲಿ ಇಷ್ಟಲಿಂಗವಾಗಿಯೂ ಲಿಂಗವೇ ಮನಸ್ಸಿನಲ್ಲಿ ಪ್ರಾಣಲಿಂಗವಾಗಿಯೂ ಜಂಗಮವೇ ಭಾವದಲ್ಲಿ ಭಾವಲಿಂಗವಾಗಿಯೂ ಬಂದಿರುವರೆಂದು ತಿಳಿಯಬೇಕು.

೨೯೭. ಜೀವದ ಆಸೆಯು ಬಿಟ್ಟಿಹ
ಭೂಮಿಯ ಫಲ ಭೋಗ ಬಯಕೆ ಕನಸಿನೊಳಿಲ್ಲಂ
ಕಾಮಿನಿಯನೊಲ್ಲನಾತಂ
ತ್ಯಾಗಿಯು ಮಹ ದೇವನೆಂಬೆ ಬಸವ ಪ್ರಭುವೇ

೨೯೮. ಸತ್ಯದ ಸತ್ಕಾಯಕದಿಂ
ನಿತ್ಯ ಗುರು ಲಿಂಗ ಜಂಗಮ ತೃಪ್ತಿಯ ಮಾಳ್ಪ
ಉತ್ತಮ ದಾಸೋಹಿಗೆ ನೆರೆ
ಭೃತ್ಯನ ಮಾಡೆನ್ನ ಸಲಹ ಬಸವ ಪ್ರಭುವೇ

೨೯೯. ಮನವಚನ ಕಾಯದಿಂದ
ಅನವರತ ಮೂಲ ಮಂತ್ರವ ನೆನೆವನ ಪದದಾ
ವನಜದ ಯುಗ್ಮವ ಭಜಿಸುವ
ಘನಪದವನಿತ್ತು ಸಲಹೈ ಬಸವ ಪ್ರಭುವೇ

೩೦೦. ಮೇಲಾಗಲೊಲ್ಲೆನಾಳು
ಕೀಳಿಂಗೆ ಕರಿವುದಲ್ಲದೆ ಮೇಲಿಂಗುಂಟೇಂ
ಮೇಲಾದ 'ಶರಣ' (ಪ್ರಮಥ) ರಂಘ್ರಿಗೆ
ಕೀಳಾಳ ಮಾಡು ದೇವಾ ಬಸವ ಪ್ರಭುವೇ

೩೦೧. ಇಷ್ಟ ಮಹ ಲಿಂಗ ಪ್ರಾಣಂ
ಅಷ್ಟಾವರಣಂಗಳಾಚರಣೆ ದೃಢ ಮನದಿಂ
ಗಟ್ಟಿ ಯಹ ಧೀರ ಶರಣನ
ಚಟ್ಟಿಗನ ಮಾಡಿ ಸಲಹೈ ಬಸವ ಪ್ರಭುವೇ

೩೦೨. ಲಿಂಗ ಸಮೇಳದಿ ನಡೆಯುವ
ಲಿಂಗ ಸಮೇಳದಿ ನಡೆಯುವ ಶರಣಂಗಳೊಳಂ
ಲಿಂಗಮಯಮಾದ ಶರಣನ
ಲಿಂಗರಿಂಗಣಿಸು ದೇವಾ ಬಸವ ಪ್ರಭುವೇ

೨೦೩. ಗಂಡ (ಒಡೆಯ) ಶಿವಲಿಂಗವೆನುತಂ
ಮಂಡೆಯನ್ನು ಬೋಳಾದ ಜಂಗಮವು ಹರಣ (ಪ್ರಾಣ) ವೆನುತ್ತಂ
ಕಂಡು ನಡೆ ನುಡಿವ ಭಕ್ತಗೆ
ಕೊಂಡವನಾಗಿಸು ದೇವ ಬಸವ ಪ್ರಭುವೇ

೨೦೪. ಭಕ್ತನೆ ಧರ್ಮದ ರೂಪಂ
ಭಕ್ತನೆ ತಾಂ ಸತ್ಯ ಶರಣ ಸೈರಣೆವಂತಂ
ಭಕ್ತನ ಮಾರ್ಗದ ಬಜನೆಯು
ಭಕ್ತಿಯನಿತ್ತೆನ್ನ ಸಲಹು ದೇವ ಬಸವ ಪ್ರಭುವೇ

೨೦೫. ಪುಣ್ಯದ ಶೈಲದೊಳಿಲ್ಲಂ
ಪುಣ್ಯ ಕ್ಷೇತ್ರದೊಳಗಿಲ್ಲ ತೀರ್ಥದೊಳಿಲ್ಲಂ
ಪುಣ್ಯಮಯ ಭಕ್ತ ಹೃನ್ನಡು
ಗಣ್ಣಿನೊಳು ಶಿವನಿರ್ಪಂ ದೇವ ಬಸವ ಪ್ರಭುವೇ

---

೨೦೩. ಕೊಂಡವನು = ಆಳು

೨೦೫. ಪುಣ್ಯಶೈಲ (ಪುಣ್ಯಾರಣ್ಯ) ತೀರ್ಥ ಕ್ಷೇತ್ರ ಯಾತ್ರೆಗಳಿಗೆ ಹೋಗಿ ಅಲ್ಲಿ (ತನಗಿಂತ ಬೇರೆಯಾಗಿ) ಮಹಾದೇವನಿದ್ದಾನೆ, ಎಂದು ಆರಾಧಿಸುವುದು ಲೌಕಿಕರಪದ್ಧತಿ. ತನ್ನಲ್ಲಿ ಶಿವನಿದ್ದಾನೆ, ಅವನು ನೇತ್ರ ಎಂಬ ಹೃದಯದ ನಡುವೆ ಇದ್ದಾನೆ ( ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ ) ಎಂಬುಕ್ತಿಗನುಸಾರವಾಗಿ ನೇತ್ರದಲ್ಲಿನ ಕರಿಯ ಗುಡ್ಡಿಯ ನಡುವೆ ಹಾಲೆ (ಪಾಪೆ)ಯಾಗಿ ಇರುವ ವ್ಯಕ್ತವಾದ (ಸೂಕ್ಷ್ಮದ) ರೂಪವನ್ನೇ ಗುರುವು ಇಷ್ಟಲಿಂಗ (ಸ್ಥೂಲರೂಪ)ವಾಗಿ ಮಾಡಿಕೊಟ್ಟಿದ್ದಾನೆ, ಎಂದು ಶಿವಭಕ್ತನು ತಿಳಿದು ಅದನ್ನು ಆರಾಧಿಸುವುದು ಮೇಲಿಕಂಡ ಲೌಕಿಕರ ಪದ್ಧತಿಗಿಂತ ಬಹಳ ಉತ್ತಮವಾದುದು. ಊರ್ಧ್ವ ಹೃದಯವು ಶಿರಸ್ಸಿನ ಬ್ರಹ್ಮರಂಧ್ರ, ಮಧ್ಯ ಹೃದಯವು ಭ್ರೂಮಧ್ಯ, ಅಧೋಹೃದಯವು ರಕ್ತ ಕೋಶ (Heart), ಎಂದು ಪ್ರಮಾಣವಿರುವುದರಿಂದ ಹೃನ್ನಡುಗಣ್ಣು ಎಂಬುದರ ಅರ್ಥವು ಭ್ರೂಮಧ್ಯ ಎಂದು ಶಿವಜ್ಞರು ತಿಳಿಯುತ್ತಾರೆ. ಶಿವಭಕ್ತರಾದವರು ಮೂರ್ತಿಪೂಜೆ ಮೊದಲಾದವುಗಳ ಉದ್ದೇಶವನ್ನಿಟ್ಟುಕೊಳ್ಳದೆ ಲೀಲೆಗಾಗಿ ಕ್ಷೇತ್ರಾದಿಗಳ ಯಾತ್ರೆಯನು ಮಾಡಬಹುದು.

೨೦೬. ಸುರಪನ ಪದವಿಯು ನೊಲ್ಲಂ
ಹರಿ ಪದವಿಯನೊಲ್ಲನಜನ ಪದವಿಯನೊಲ್ಲಂ
ಸುರುಚಿರ ಭಕ್ತನು ಆತನ
ಚರಣ ಸ್ಮರಣೆಯೊಳಗಿರಿಸು ದೇವಾ ಬಸವ ಪ್ರಭುವೇ

೨೦೭. ಭವ ದುಃಖಕೊಳಗುವ ಮಾಡುವ
ತವೆ ಸಾಲೋಕ್ಯಾದಿ ಪದಗಳನೊಲ್ಲನಂತಾ
ಶಿವಭಕ್ತನ ಕಡೆಬಾಗಿಲ
ತವೆ ಕಾದಿರುವಂತೆ ಮಾಡು ದೇವಾ ಬಸವ ಪ್ರಭುವೇ

೨೦೮. ಕಡವರ ದಾಸೆಯುದಿಲ್ಲಂ
ಕಡು ಚೆಲುವ ಕಾಮಿನೀ ಸುರತ ಭೋಗವನೊಲ್ಲಂ
ದೃಢ ವಿರತಿಯುಳ್ಳ ಭಕ್ತನ
ಅಂಗೆಂಗುವಂ ಮಾಡ್ಯ ಬಸವ ಪ್ರಭುವೇ

೨೦೯. ಗುರು ಲಿಂಗ ಚರ ಪ್ರಸಾದಂ
ನಿರುಪಮ ಸಾರಾಯು ಪದವಿ ನಾಲ್ಕನರೊಳಗಂ
ಪರಿಪೂರ್ಣನಾದ ಭಕ್ತಂ
ವರ ವೀರಶೈವ ನೆನಿಸಂ ಬಸವ ಪ್ರಭುವೇ

## ೩೫. ಲಿಂಗಾಂಗ ಸಂಗ

೨೧೦. ಲಿಂಗದ ಪೂಜೆಯ ಮಾಡುತ
ಲಿಂಗವನು ಜ್ಞಾನಿಸಿ ಹಾಡಿ ಕೊಂಡಾಡುತ್ತಂ
ಲಿಂಗದ ಲೋಲುಪನಾದರೆ
ಲಿಂಗಾಂಗ ಸಂಗವೆಂಬೆನು ಬಸವ ಪ್ರಭುವೇ

೨೧೧. ಲಿಂಗದ ವಾರ್ತೆಯ ಕೇಳುತ
ಲಿಂಗದ ವಚನಗಳನೋದಿ ಅರ್ಥಯಿಸುತ್ತಂ
ಲಿಂಗದ ಸುಮೋಹಿಯಾದರೆ
ಲಿಂಗಾಂಗ ಸಂಗವೆಂಬೆನು ಬಸವ ಪ್ರಭುವೇ

೨೧೨. ಲಿಂಗದ ಮೂಗಿಲಿ ವಾಸಿಸಿ
ಲಿಂಗದ ಜಿಹ್ವೆಯೊಳು ಷಡು ರಸವ ರುಚಿಸುತ್ತಿ
ಲಿಂಗದ ನೇತ್ರದಿ ನೋಡಲು
ಲಿಂಗಾಂಗ ಸಂಗ ಮಾರ್ಗೆ ಬಸವ ಪ್ರಭುವೇ

೨೧೩. ಲಿಂಗದ ಚರ್ಮದಿ (ತ್ವಕ್ಕಿಂ) ಸೋಂಕಲ
ಲಿಂಗದ ಕಿವಿಯಿಂದ ಸು ಶಬ್ದವನೇ ಕೇಳಲ್
ಲಿಂಗ ಹೃದಯ ತೃಪ್ತಿ ಪಡಲ್
ಲಿಂಗಾಂಗ ಸಂಗ ಷಡ ವಿಧ ಬಸವ ಪ್ರಭುವೇ

೨೧೪. ಲಿಂಗದ ತನುವಿಂ ನಡೆಯಲು
ಲಿಂಗದ ವಚನಂಗಳಿಂದ ತಪ್ಪದೆನುಡಿಯಲ್
ಲಿಂಗದ ಮನದಿಂ ನೆನೆಯಲು
ಲಿಂಗಾಂಗ ಸಂಗವೆಂಬೆ ಬಸವ ಪ್ರಭುವೇ

೨೧೫. ಅಂಗದ ವಿಷಯವ ಸೋಂಕದೆ
ಲಿಂಗದ ಮುಖದಿಂ ಪ್ರಸಾದವ ಸು ಭೋಗಿಸುತಂ
ಲಿಂಗಾಂಗ ಉಭಯ ಕೂಡಲು
ಲಿಂಗೈಕ್ಯಂ ಮಹಿಮನೆಂಬೆ ಬಸವ ಪ್ರಭುವೇ

೨೧೬. ಗುರುವು ನಿಜಲಿಂಗ ಜಂಗಮ
ವರ ಸು ಪ್ರಸಾದ ಘನ ಪಾದೋದಕವೈದುಂ
ಚಿರಂತ ಬೇರಿರದಿರ್ದೊಡೆ
ಸು ರುಚಿರ ಸದ್ವೃತ್ತವಯ್ಯಾ ಬಸವ ಪ್ರಭುವೇ

---

೨೧೬. ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದಗಳು ಅವ ಕನ್ನಲ್ಲಿ ಇಷ್ಟವುಗಳೇ ಹೊರಗೆ ರೂಪವನಾಳಿಕೊಂಡು ಬಂದಿವೆ ಎಂದು ಅ ದ್ವೈತ ಭಾವವಿಟ್ಟು ಆಚರಿಸಬೇಕು.

೨೧೭. ಮಾರುತ ಪರಿಮಳದ ಹಾಗೆಯೆ
ಉರಿ ಉಷ್ಣದ ಹಾಗೆ ಪದ ಪದಾರ್ಥದ ಪರಿಯೊಳ್
ಪರಮೇಷ್ಟ ಲಿಂಗ ಭಕ್ತನು
ಎರಡೊಂದು ವಸ್ತುನೋಡಾ ಬಸವ ಪ್ರಭುವೇ

## ೩೬. ಭಕ್ತನಿಗೆ ಯೋಗ್ಯವಾದ ನಿಯಮ.

೨೧೮. ಕಪಟಗುಣ ಸಲ್ಲ ಭಕ್ತಗೆ
ತಪಗಳು ದುಸ್ಸೀಲ ನೇಮ ಭಾಷೆಯು ಸಲ್ಲ
ಸು ಪಥ ಕರದಿಷ್ಟಲಿಂಗದಿ
ಗುಪಿತದ ಷಣ್ಮಂತ್ರ ಲೇಸು ಬಸವ ಪ್ರಭುವೇ

೨೧೯. ಕಡಲೆಯು ನೇಮದಿ ಕುದುರೆಯು
ಬಿಡಾಲ ಹಾಲಿನ ನೇಮದಿ ಹೂ ನೇಮದಿನಾ
ರಡಿಯಾಗಿ ಪುಟ್ಟುತಿರ್ಪ 'ರು' (ವು?)
ದೃಢಭಕ್ತಗೆ ನೇಮ ಸಲ್ಲ ಬಸವ ಪ್ರಭುವೇ

೨೨೦. ಮರ್ತ್ಯನೆನಿಸುತ್ತ ಭೂಮಿಯ
ಸುತ್ತುತ ಸಂಚರಿಸಿಯುಳುತ ಬಳಲುವುದೇಕೈ
ಚಿತ್ತವು ಷಣ್ಮಂತ್ರ ಮೂಲ
ಗೊತ್ತಿನೊಳಗಿಹುದು ತಕ್ಕುದು ಬಸವ ಪ್ರಭುವೇ

೨೨೧. ಮೋಕ್ಷಾಪೇಕ್ಷೆಯ ದೆಸೆಯಿಂ
ಅಕ್ಷದ ಗಂಗೆಯನು ಮಿಂದು ಬಳಲುವುದೇಕೈ
ಅಕ್ಷಯ ಗುರುಪಾದೋದಕ
ಮೋಕ್ಷದ ಜಲವೊಂದೆ ಲೇಸು ಬಸವ ಪ್ರಭುವೇ

---

೨೧೮. ಲಿಂಗವು ಷಡಕ್ಷರ ಮಂತ್ರರೂಪ. ಶರಣನ ಅಂಗವೂ ಅದರಂತೆಯೇ

೨೨೨, ಕಾಮಿತದರ್ಥವ ಬಯಸುತ
ಹೋಮದ ನೇಮವನು ಮಾಡಿ ಬಳಲುವುದೇಕೈ
ಆ ಮಹಲಿಂಗದ ಭಜನೆಯ
ನೇಮವನೆ ನಡೆಸುವುದುಚಿತ ಬಸವ ಪ್ರಭುವೇ

೨೨೩. ಕೋಟಿ ಮಿಗೆ ಜಪವನೆಣಿಸುವ
ಕೋಟಲೆ ಕೈಗೊಂಡು ತಾನು ಬಳಲುವುದೇಕೈ
ನೀಟಾಗಿ ಜಂಗಮಾರ್ಚನೆ
ಮಾಟದೊಳಗಿಹುದಿದೆ ಲೇಸು ಬಸವ ಪ್ರಭುವೇ

೨೨೪. ವೇದ ಶೃತಿ ಶಾಸ್ತ್ರದಿಂದಂ
ಸಾಧಿಸುವೆನೆಂದು ಓದುತ ಬಳಲುವುದೇಕೈ
ಆದಿಮಹಲಿಂಗ ದೇವನ
ಪಾದವನು ನಂಬಲುಚಿತವು ಬಸವ ಪ್ರಭುವೇ

೨೨೫, ಅಷ್ಟಾಂಗ ಯೋಗವೆಂಬಾ
ಕಷ್ಟದ ಕರ್ಮಕ್ಕೆ ಬಿದ್ದು ಬಳಲುವುದೇಕೈ
ಶ್ರೇಷ್ಠವಹ ವೀರಶೈವದ
ನಿಷ್ಠೆಯಲಿ ಇರುವುದುಚಿತವು ಬಸವ ಪ್ರಭುವೇ

### ೩೭. ಅಮುಖ್ಯವಾದ ಶೀಲ ಮತ್ತು ಅಶೀಲ.

೨೨೬. ಅರಿವೆ ಮುಟ್ಟಲು ತೊಳೆಯುತ
ಕೆರೆ ಭಾವಿ ಹೊಂಡ ಮಡುಗಳ ನೀರಂ ಬಿಡುತಂ
ಬರಿಗಾಲಿನಿಂದ ನಡೆದರೆ
ನೆರೆ ಶೀಲದಿ ಮುಖ್ಯರಲ್ಲ ಬಸವ ಪ್ರಭುವೇ

---

೨೨೩. ಜಪವಮಾಡಿ ಮೋಕ್ಷವನ್ನು ಪಡೆವೆನೆಂಬುದು ಸರಿಯಲ್ಲ.
೨೨೪. ಸಾಧಿಸುವೆನೆಂದು = ಮೋಕ್ಷವ ಪಡೆವೆನೆಂದು

೨೨೭. ಪರಮ ಶಿವಲಿಂಗವಿರುತಿರೆ
ಪರದೈವವ ತಂದು ಮನೆಯೊಳಗಿಟ್ಟು ಪೂಜಿಸುತಂ
ನೆರೆ ನಿರ್ಮಾಲ್ಯವ ತಿನ್ನುವ
ನರಸಿಗೆ ಶೀಲದಿ ಫಲವೇಂ ಬಸವ ಪ್ರಭುವೇ

೨೨೮ ತೃಷೆಗೆ ಜಡನೀರ ಕುಡಿವರು
ಹಸಿವಿಗೆ ಸಲೆ ಭೌತಿಕಾನ್ನವಿಚ್ಛೆಯಿನುಂಬರ್
ವಿಷಯ ರತಿಯಿಂದ ಕೆಡುವರು
ಪಶುಭಾವರಿಗೇಕೆ ಶೀಲ ಬಸವ ಪ್ರಭುವೇ

೨೨೯. ಗುರು ಕೊಟ್ಟ ಲಿಂಗವಿರ್ದುಂ
ಧರೆಯುಲಿಹ 'ದೈವ' ( ಮೂರ್ತಿ ) ನಿರ್ಮಾಲ್ಯವನುರೆ ತಿನುತಂ
ಗುರುಬೋಧೆಯ ಮೀರುತಲಿಹ
ನರಕುನ್ನಿಗೇಕೆ ಶೀಲಂ ಬಸವ ಪ್ರಭುವೇ

೨೩೦. ತೊತ್ತುವು ಬಂಟರು ಸಹಿತಂ
ಎತ್ತುಂ ಕಂಟಲೆ ಕಾನುಂ ಯಾತ್ರೆಗೆಯುತ್ತಂ
ಪೃಥ್ವಿಯ ಲಿಂಗಕ್ಕೆರಗುವ
ಮರ್ತ್ಯರಿಗಿನ್ನೇಕೆ ಶೀಲ ಬಸವ ಪ್ರಭುವೇ

೨೩೧. ಬಲು ಶೀಲವಂತರೆನುತಂ
ಸಲೆ ಸೋಮ ಮಂಗಳವಾರ ಒಪ್ಪೊತ್ತಿರುತಂ
ಕುಲದೇವರೆಂದು ಭಜಿಸುವ
ನೆಲೆಯರಿಯದಗೇಕೆ ಶೀಲ ಬಸವ ಪ್ರಭುವೇ

---

೨೨೭. ಪರದೈವ = ಅನ್ಯದೇವರು. (ಗುಡಿ, ದಾರಿ, ಅಡವಿ ಮುಂತಾದ ಕಡೆಗಳಲ್ಲಿ ಇದ್ದ ಪ್ರತಿಮೆಗಳು.)

೨೩೨ ಅರಿವರ್ಗಂಗಳ ಸೋಂಕದೆ
ಅರವತ್ತು (ಅರಿವೊತ್ತು) ಆರುಕೋಟಿ ಕರಣಗಳ ಬಿಡುತಂ
ದುರಿತಗಳೈದನು ಉಳಿವುಲು
ನೆರೆ ಶೀಲವಂತರೆಂಬೆನು ಬಸವ ಪ್ರಭುವೇ

೨೩೩. ಮೂರು ಗುಣ ಮೂರು ಕರಣಂ
ಮೂರು ತನು ಮೂರು ಮನ ಮೂರು ಭಾವವಿಂತೀ
ಮೂರು ವಿಧ ಲಿಂಗವಾದಡೆ
ಮೀರಿದ ಘನಶೀಲರೆಂಬೆ ಬಸವ ಪ್ರಭುವೇ

೨೩೪. ಪರಧನವನು ಅಪಹರಿಸದೆ
ಪರವೆಣ್ಣನೋಡಿ ಕಣ್ಣಿಂ ಭ್ರಮಿಸದೆ ಮನದೊಳ್
ಪರದೈವಕೆರಗದಿರ್ದೊಡೆ
ವರ ಶೀಲವಂತ ರೆಂಬೆನು ಬಸವ ಪ್ರಭುವೇ

೨೩೫. ಗುರು ಸೇವೆಗೆ ತನುವಿತ್ತಂ
ಪರ ಶಿವಲಿಂಗಕ್ಕೆ ಮನವ ನೆನೆಯಲ್ಕಿತ್ತಂ
ಚರ ತೃಪ್ತಿಗೆ ಧನವಿತ್ತಂ
ನೆರೆಶೀಲವಂತರೆನಿಪರು ಬಸವ ಪ್ರಭುವೇ

---

೨೩೨. ಕೋಟಿ=ಮುಖ್ಯ. ೬ ಕರಣಗಳು=ಚಿತ್ತ, ಬುದ್ಧಿ, ಮನ, ಅಹಂಕಾರ, ಜ್ಞಾನ, ಭಾವ. ಉಳಿ = ಬಿಡು.

೨೩೫. ತನಗೆ ತನುವಿಲ್ಲ ಅದು ಗುರುವಿನದೆಂದೂ ತನಗೆ ಮನವಿಲ್ಲ ಅದು ಲಿಂಗದ್ದೆಂದೂ ತನಗೆ ಧನವಿಲ್ಲ ಅದು ಜಂಗಮದ್ದೆಂದೂ ಶರಣನು ತಿಳಿದು ನಡೆಯಬೇಕು. "ಅರ್ಥಾಶ್ಚ ಬಹಿಃಪ್ರಾಣಾಃ" ಎಂದಿರುವುದರಿಂದ ಹೊರಗಿನ ಪ್ರಾಣವಾದ ಧನವನ್ನು ಅರ್ಪಿಸುವದಕ್ಕಿಂತಲೂ ಪ್ರಾಣವು ನನ್ನದಲ್ಲ ಅದು ಜಂಗಮದ್ದು ಎಂದು ಅರ್ಪಿಸುವದೇ ಬಹಳ ಮೇಲಾದುದು. ಇದರಲ್ಲಿಯೇ ಸರ್ವಾರ್ಪಣವಾಗುವುದು.

೨೩೬. ಬಯಸೆ 'ಬರಲಂಗ' (ಬಂದಂಗ) ಭೋಗಂ
ಬಯಸದೆ ತಾನೇ ಬಂದುದು ಲಿಂಗದ ಭೋಗಂ
ಪ್ರಿಯ ಲಿಂಗ ಭೋಗಿಯಾದರೆ
'ನಯ' [ಸ್ವಯ] ಶೀಲವಂತರೆಂಬೆನು ಬಸವ ಪ್ರಭುವೇ

೨೩೭. ತನುಮುಟ್ಟಿದು ಲಿಂಗಾರ್ಪಿತ
ವಿನಯದ ಪಂಚೇಂದ್ರಿ ಸೋಂಕು ಲಿಂಗಾರ್ಪಿತವಂ
ಮನ ಮುಟ್ಟಿದು ಲಿಂಗಾರ್ಪಿತ
ಘನ ಶೀಲವಂತ ಮಾಳ್ಪಂ ಬಸವ ಪ್ರಭುವೇ

೨೩೮. ತೃಷೆಗೆ ಪದ ಜಲವನೀಂಟುತ
ಹಸಿವಿಚ್ಛೆಗೆ ಸುಪ್ರಸಾದ ಪಡೆದುಂ ಸವಿದುಂ
ವಿಷಯ ಮಹಲಿಂಗವಾದಡೆ
ಅಸಮ ಸುಖಶೀಲವೆಂಬೆನು ಬಸವ ಪ್ರಭುವೇ

೨೩೯. ಕಾಮಿಸಿ ಬಂದ ಪದಾರ್ಥವ
ತಾಮುಕವೆಂದಳಿದು ಲಿಂಗದಾಣತಿಯನ್ನೇ
ಪ್ರೇಮದಿ ತೃಪ್ತಿಯಗೊಳಿಸುವ
ನೇಮವನಿತ್ತೆನ್ನ ಸಲಹು ಬಸವ ಪ್ರಭುವೇ

೩೮ (೨೩೨—೨೩೯) ಈ ಪದ್ಯಗಳು ಶೀಲವಂತರು ಎಂಬ ಶಿರೋಲೇಖಕ್ಕೆ ಸೇರಬೇಕು.

## ೬೯. ವೀರಶೈವರ ನಡತೆ.

೨೪೦. ಊರೊಳಿರೆ ನರರ ಹಂಗಿಗ
ಅರಣ್ಯದೊಳಗಿರ್ದಡೆ ತರುಗಳ ಹಂಗಿಗನೈ
ಶೂರ ಮಹಲಿಂಗ ನೇಮದಿ
ಆರದು ಹಂಗಿಲ್ಲದಿರಿಸು ಬಸವ ಪ್ರಭುವೇ

---

೨೩೫. (ಮುಂದುವರಿದುದು) ಗುರುವಿಗೆ ಆಚಾರ ಮತ್ತು ನೀತಿಯುಕ್ತನಾದ ಸೇವೆಯನ್ನರ್ಪಿಸುವುದು ಗುರುವಿಗೆ ತನುವನಿತ್ತಂತೆ.

೨೩೬. ಬಯಸಿಬಂದುದು ಅಂಗಭೋಗ, ಆದುದರಿಂದ ಬಯಸಬಾರದು

೨೩೭. ಮುಟ್ಟಿದು = ಮುಟ್ಟಿದುದು.

೨೪೧. ಒಮ್ಮೆ ಮಠ ಮನೆಯೊಳಿರ್ದಡು
ಒಮ್ಮೆ ಅಡವಿ ಗಿಡ ಬೆಟ್ಟದ ಗವಿಯೊಳಗಿರ್ದುಂ
ಒಮ್ಮನದಿ ನಿಮ್ಮ ನೇಮದಿ
ಗಮ್ಮನೆ ಇರುವಂತೆ ಮಾಡು ಬಸವ ಪ್ರಭುವೇ

೨೪೨. ಚಾರು ಷಡುಮಂತ್ರ ಸಹಿತವೆ
ನೆರೆ ಮೂರೇಳುಂ ಸಾಸಿರ ಷಡು ಶತ ಜಪವಂ
ಆರೈದು ಜಪಿಸುವಾತನು
ಶೂರನು ಲಿಂಗೈಕ್ಯನೆಂಬೆ ಬಸವ ಪ್ರಭುವೇ

೨೪೩. ಬಲು ಬೇಕೆಂಬುದು ತನು ಗುಣ
ಒಲಿದರೆಯು ಒಲ್ಲೆನೆಂಬುದು ಕಡುವೈರಾಗ್ಯಂ
ಸುಲಭದಿ ಉಭಯವನಳಿದರೆ
ಛಲ ಶೀಲವಂತರೆಂಬೆನು ಬಸವ ಪ್ರಭುವೇ

೨೪೪. ವಂದನೆಗೆ ಹಿಗ್ಗಿ ನಿಲ್ಲದೆ
ನಿಂದೆಯ ನೆ ಕೇಳಿ ಹಿಂದಕೆ ಸರಿಸದೆ ಮನವಂ
ಹಿಂದನು ಮುಂದನು ಹಾರದೆ
ನಿಂದಾತನೆ ಧೀರನೆಂಬೆ ಬಸವ ಪ್ರಭುವೇ

೨೪೫. ಗುರು ಕೊಟ್ಟ ಲಿಂಗ ಭಕ್ತಿಯು
ನೆರೆ ಏರ್ದ ನಿಲ್ಲೆ ರೋಗ ತುರಿ ಹುಣ್ಣು ಮತ್ತಾ
ಕುರುಗಳ ಸಲೆ ಬಾಧೆಯಿಂದ
ಪರಶಿವನು ಕಾಡುತಿರುವನು ಬಸವ ಪ್ರಭುವೇ

---

೨೪೪. ಹಿಂದನು ಮುಂದನು ಹಾರದೆ = ಹಿಂದಿನ ಸಂಚಿತ ಕರ್ಮವನ್ನೂ ಮುಂದಿನ ಆಗಾಮಿ ಕರ್ಮವನ್ನೂ (ಜನ್ಮವನ್ನೂ) ಅಪೇಕ್ಷಿಸದೆ ಇರುವುದು

೨೪೫. ಆಚಾರದಲ್ಲಿ ತಪ್ಪಿ ನಡೆದರೆ ಅನಾರೋಗ್ಯವೆಂಬುದು ಲೋಕಪ್ರಸಿದ್ಧ.

## ೪೦. ಶಿವನು ಶರಣನನ್ನು ಪರೀಕ್ಷಿಸಿ ನೋಡುವುದು.

೨೪೬. ಲಿಂಗವನು ನೋಡುತಿರ್ಪ
ಕಂಗಳಿಗೆ 'ಹೆಂಗಳೆಯು' (ಹೆಂಗಸರ?) ಹೊಳಪಿನ ಬಹುರೂಪಂ
ಗಳ ಬೀರುತ ತೋರಿಸುತಂ
ಭಂಗಪಡಿಸುವನು ಶಿವ ತಾಂ ಬಸವ ಪ್ರಭುವೇ

೨೪೭. ಲಿಂಗವನು ನೆನೆವ ಮನಸಿಗೆ
ಪ್ರೊಂಗಳ ದುರಾಸೆ ರೋಷಾಹಂಕಾರ ದುರ್ವೋ
ಹಂಗಳನು ತೋರಿ ಬಹುತರ
ಭಂಗವ ಪಡಿಸುವನು ಶಿವನು ಬಸವ ಪ್ರಭುವೇ

೨೪೮. ಪರಶಿವನು ತನ್ನ ಭಕ್ತರ
ಪರಿಕಿಸಲುಬೇಕೆನುತ ಬಹು ಕಷ್ಟಪಡಿಸುತಂ
ತ್ವರಿತದಿ ಗಳಿಸಿದ ಅರ್ಥವ
ಬರಿಗೈಯ ಮಾಡಿ ಕಾಡುವ ಬಸವ ಪ್ರಭುವೇ

೨೪೯. ಶಿವ ತನ್ನ ನಂಬಿದವರಿಗೆ
ತವೆಯಾಪ್ತ ಬಂಧುಬಳಗವ ವೈರಿಯ ಮಾಳ್ಪಂ
ಅವನಿಯೊಳು 'ಪ್ರೌಢ' (ಜಾಣ) ನಾದಡು
ಅವಿವೇಕಿ ಎನಿಸಿ ಕಾಡುವ ಬಸವ ಪ್ರಭುವೇ

೨೫೦. ಕನಕವನು ಕಾಸಿ ಕಡಿಯುತ
ಚಿನಿವಾರ ನೋಡುವಂತೆಯೆ ಭಕ್ತರ ಮನದಾ
ಕನಕದ ಕೊರಡನು ಕಲಕಿಸಿ
ಚಿನುಮಯ ತಾಂ ನೋಡುತಿಹನು ಬಸವ ಪ್ರಭುವೇ

೨೫೧. ಜನ ತಮ್ಮ ಸೌಖ್ಯದಿಚ್ಛೆಗೆ
ಇನಿಗೋಲ ಕಡಿದು ಗಾಣದೊಳಿಕ್ಕುವ ತೆರದೊಳ್
ಘನ ಶಿವನು ತನ್ನ ಭಕ್ತರ
ತನು ಮನ ನೋಯಿಸುವ ನೋಡು ಬಸವ ಪ್ರಭುವೇ

೨೫೭. ಗಂಧವನು ಕಡಿದು ಸುಡೆ ಸದು
ಗಂಧವೆ ಅಪ್ಪಂತೆ ಶಿವ ಸದ್ಭಕ್ತರ ಮನವಂ
ಅಂಡದಲಿ ಕಾಡಿ ನೋಡುತ
ಕುಂದದಿರಲೊಪ್ಪಿಕೊಂಬನು ಬಸವ ಪ್ರಭುವೇ

## ೪೧ ಲಿಂಗಾಂಗ ಕೂಟ

೨೫೩. ಶರಿರದ ಮನೆಯಾ ವಾಮದ
ಕರ ಪೀಠದ ಸಿಂಹಾಸನ ಪತಿ ಲಿಂಗಕ್ಕಂ
ಶರಣ ಸತಿ ಮುಖ ಸರಸಿರುಹ
ವರನೇತ್ರದ ನೋಟ ಕೂಟ ಬಸವ ಪ್ರಭುವೇ

೨೫೪. ತನುವಿನ ಒಳ ವಳಿಯದೊಳಿಹ
ಅನಘ ಸದು ಹೃದಯ ಪೀಠದ ಚಿಲ್ಲಿಂಗಕ್ಕಂ
ಅನುದಿನವೆಡೆದೆರಹಿಲ್ಲದೆ
ಮನಕೆ ಘನ ನೆನಹಿನ ಕೂಟ ಬಸವ ಪ್ರಭುವೇ

೨೫೫. ಕಮಲಾಸನ ಪ್ರಕಾಶದಿ
ವಿಮಲ ಷಡುಮಂತ್ರ ಲಿಂಗದ ಸಂಯೋಗದ ಸತ್
ಕ್ರಮವು ಶೃತಿ ಶಾಸ್ತ್ರ ಸಕಲಾ
ಗಮಗಳಿಗಸಾಧ್ಯ ನೋಡಾ ಬಸವ ಪ್ರಭುವೇ

೨೫೬. ಶರಣ ಸತಿ ಲಿಂಗ ಪತಿಗಳ
ಸರಸದ ಸುಯೋಗ ಸಮರತಿ ಸಮಸುಖದಿರವಂ
ವರ ಸತ್ ಪ್ರಮಥರ ವಚನದಿ
ಅರಿದವನು ಮುಕ್ತ ನೋಡಾ ಬಸವ ಪ್ರಭುವೇ

---

೨೫೩. ಶಿವಪೂಜೆಯಲ್ಲಿ ಲಿಂಗವನ್ನು ನಿರೀಕ್ಷಿಸಿ ಅದರ ಕಳೆಯನ್ನು (ರೂಪ=ಪ್ರಕಾಶ) ನೇತ್ರಕ್ಕೆ ಬರಮಾಡಿಕೊಳ್ಳುವುದು ಲಿಂಗಾಂಗದ ಕೂಟ.
೨೫೫. ಕಮಲಾಸನ= ಬ್ರಹ್ಮರಂಧ್ರ.

೨೪೭ ಕರಪೀಠದಿಷ್ಟಲಿಂಗವು
ಸಿರದ ಪರತತ್ವ ಮೂರ್ತಿ ಎನಿಪ ಜಂಗಮವುಂ
ಎರಡೇಕವಾದ ಕೂಟವ
ಅರಿದವನೆ ಮುಕ್ತ ನೋಡಾ ಬಸವ ಪ್ರಭುವೇ

೨೪೮. ಯೋನಿಯೊಳು ಜನಿಸಿದವರಿಗೆ
ಯೋನಿಯು ರತಿ ಸುಖದ ಕೂಟ ಸೊಗಸಹ ಪರಿಯೋಲ್
ನೈನ (ನಯನ) ದೊಳಗೋಗದ ಲಿಂಗಕೆ
ಆ ನಯನದ ನೋಟ ಕೂಟ ಬಸವ ಪ್ರಭುವೇ

---

## ೪೨ ಶಬ್ದ ಚತುಷ್ಟಯ

೨೪೯. ಚಿತ್ತಕೆ ಸಿಲುಕದೊಡದು ಪರೆ
ಚಿತ್ತದ ನೆನಹಿಂಗೆ ಬರಲು ಪಶ್ಯತಿ ಜಿಹ್ವಾ
ಗೊತ್ತಿಂಗೆ ಬರಲು ಮಧ್ಯಮೆ
ಮಾತ್ತೆ ವಚನಿಸಲು (ಉಚ್ಚರಿಸೆ) ವೈಖರಿ ಬಸವ ಪ್ರಭುವೇ

೨೫೦. ನೆನಹಿಗೆ ಸಿಲುಕದೊಡದು ಪರೆ
ಮನಸಿನ ನೆನಹಿಗೆ ಬಂದಡೆ ಪಶ್ಯತಿ ಕಣ್ಣಿಂ
ಕೊನೆಗೈತಂದಡೆ ಮಧ್ಯಮೆ
ತನುವಿಗೆ ಸೋಂಕಲು ವೈಖರಿ ಬಸವ ಪ್ರಭುವೇ

೨೫೧. ಲಿಂಗವನು ನೆನೆಯಲದು ಪರೆ
ಲಿಂಗವ ಕಣ್ಣಾರೆ ನೋಡಲು ಪಶ್ಯತಿಯುಕ್ಕುಂ
ಲಿಂಗವ ನುಡಿಸಲು ಮಧ್ಯಮೆ
ಲಿಂಗವ ಪೂಜಿಸೆ ವೈಖರಿ ಬಸವ ಪ್ರಭುವೇ

---

೨೪೭. ಶಿಖಾಚಕ್ರದಲ್ಲಿ ಜಂಗಮಲಿಂಗ

೨೪೮. ಗುರುವಿನ ದೃಷ್ಟಿ ಶಿಷ್ಯನ ದೃಷ್ಟಿಯಲ್ಲಿ ಬಿದ್ದು ಮುಂದೆ ಹುಟ್ಟಿದುದು ಲಿಂಗ. ಆ ಲಿಂಗದ ಪ್ರಕಾಶವನ್ನು ನೇತ್ರವು ಎಳೆದುಕೊಂಡಾಗ ನಯನದ ಕೂಟ

## ೪೩ 'ತತ್ತ್ವಮಸಿ' ಪದತ್ರಯ

೨೬೨. ಶರಣನ ಕಾಯವು ತತ್ಪದ
ಶರಣ ಕರಪೀಠದಿಷ್ಟವೆ ತ್ವಂ ಪದವೈ
ಎರಡರ ಸಂಗವೆ ಅಸಿ ಪದ
ವರ ಪದ ಮೂರಿವು ನೋಡಾ ಬಸವ ಪ್ರಭುವೇ

೨೬೩. ಶರಣ ಕ್ರಿಯವೇ ತತ್ಪದ
ಶರಣನ ಅಂತರದ ಜ್ಞಾನ ತ್ವಂ ಪದವೈ
ಎರಡರ ಸಂಗವೆ ಅಸಿ ಪದ
ವರ ಪದ ಮೂರಿವು ನೋಡಾ ಬಸವ ಪ್ರಭುವೇ

೨೬೪. ಶರಣನ ಲಿಂಗವು ತತ್ಪದ
ಶರಣನ ಅಂತರದ ಸು ಮಂತ್ರ ತ್ವಂ ಪದವೈ
ಎರಡರ ಸಂಗವೆ ಅಸಿಪದ
ವರ ಪದ ಮೂರಿವು ನೋಡಾ ಬಸವ ಪ್ರಭುವೇ

೨೬೫. ಶರಣನ ಕುರುಹೇ ತತ್ಪದ
ಶರಣನ ಅಂತರದರುಹೇ ತಾಂ ತ್ವಂ ಪದವೈ
ಎರಡರ ಸಂಗವೆ ಅಸಿ ಪದ
ವರ ಪದ ಮೂರಿವು ನೋಡಾ ಬಸವ ಪ್ರಭುವೇ

## ೪೪ ನಾದ ಬಿಂದು ಕಲೆಗಳು

೨೬೬. ಅಕಾರ ಬೀಜವು ತತ್ಪದ
ಉಕಾರ ಬೀಜವು ತಾಂ ತ್ವಂ ಪದವೈ
ಮಕಾರ ಬೀಜವೆ ಅಸಿಪದ
ತ್ರಿಕೂಟ ತಾಂ ತತ್ತ್ವಮಸಿಯು ಬಸವ ಪ್ರಭುವೇ

೨೬೭. ಅಕಾರವೀಡಾನಾಡಿಯು
ಉಕಾರ ವೆಂಬಾ ಪ್ರಣವವು ಸಲೆ ಪಿಂಗಳವೈ
ಮಕಾರ ಸುಷುಮ್ನ ನಾಡಿಯು
ತ್ರಿಕೂಟವೆ ಸಂಗಮೇಶ ಬಸವ ಪ್ರಭುವೇ

೨೬೮. ಅಕಾರ ಬೀಜವು ಸತ್ಕ್ರಿಯು
ಉಕಾರ ವೆಂಬಾ ಪ್ರಣವವೆ ಸಮ್ಯಕ್ ಜ್ಞಾನಂ
ಮಕಾರವುಭಯುದ ಕೂಟಂ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೬೯. ಅಕಾರ ಬೀಜ ಚಿದಂಗಂ
ಉಕಾರವೆಂಬಾ ಪ್ರಣವವೆ ಚಿದ್ಘನ ಲಿಂಗಂ
ಮಕಾರವುಭಯುದ ಕೂಟಂ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೭೦. ಅಕಾರ ಕಲೆ ಚಿನ್ನಾದಂ
ಉಕಾರ ಚಿದ್ಬಿಂದುವೆಂಬಿರವಿನ ಪ್ರಣವಂ
ಮಕಾರವದು ಚಿತ್ಕಳೆ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೭೧. ಅಕಾರವನಹತ ನಾದಂ
ಉಕಾರ ಬಿಂದುವು ಊರ್ಧ್ವಗದ ರೇಕಸು ಅಹುದೈ
ಮಕಾರ ವುಭಯದ ಕೂಟಂ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೭೨. ಅಕಾರ ಕಾಂ ಕಾಯಾರ್ಪಿತ
ಉಕಾರವೆಂಬಾ ಪ್ರಣವಂ ಕರಣಾರ್ಪಿತವೈ
ಮಕಾರವದು ಭಾವಾರ್ಪಿತ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೭೩. ಅಕಾರವದು ಕರುಣಾ ಜಲ
ಉಕಾರವೆಂಬಾ ಪ್ರಣವಂ ವಿನಯದ ಜಲವೈ
ಮಕಾರವದು ಸಮತಾ ಜಲ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೧೭೪. ಅಕಾರವಂಗದ ರೂಪಂ
ಉಕಾರವೆಂಬಾ ಪ್ರಣವ ಲಿಂಗದ ರುಚಿಯೈ
ಮಕಾರ ಮುಖಯುದ ತೃಪ್ತಿಯು
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೧೭೫. ಅಕಾರವು ತನುವಿನ ಕುರುಹು
ಉಕಾರವೆಂಬಾ ಪ್ರಣವವು ಉನ್ಮನಿ ಕುರುಹೈ
ಮಕಾರವದುವೆ ನಿಜದಿರವು
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೧೭೬. ಅಕಾರ ಬೀಜ ಶ್ರೀಗುರು
ಉಕಾರನೆಂಬಾ ಪ್ರಣವಂ ವರ ಶಿವಲಿಂಗಂ
ಮಕಾರ ಬೀಜವೆ ಜಂಗಮು
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೧೭೭. ಅಕಾರವದು ದೀಕ್ಷಾಗುರು
ಉಕಾರವೆಂಬಾ ಪ್ರಣವಂ ಶಿಕ್ಷಾಗುರುವೈ
ಮಕಾರ ತಾಂ ವೋಕ್ಷದ ಗುರು
ತ್ರಿಕೂಟವೆ ಮೂಲ ವ,ಂತ್ರಂ ಬಸವ ಪ್ರಭುವೇ

೧೭೮. ಅಕಾರವದಿಷ್ಟಲಿಂಗಂ
ಉಕಾರವೆಂಬಾ ಪ್ರಣವ ಪ್ರಾಣದ ಲಿಂಗಂ
ಮಕಾರವೆ ಭಾವ ಲಿಂಗಂ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೧೭೯. ಅಕಾರವು ಸ್ವಯ ಜಂಗಮು
ಉಕಾರವೆಂಬಾ ಪ್ರಣವಂ ಚೆರ ಜಂಗಮುವೈ
ಮಕಾರವದು ಪರ ಜಂಗಮು
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೪೦. ಅಕಾರ ಗುರು ಪಾದೋದಕ
ಉಕಾರವೆಂಬುದದು ಲಿಂಗ ಪಾದೋದಕವೈ
ಮಕಾರ ಚರ ಪಾದೋದಕ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೪೧. ಅಕಾರ ಶುದ್ಧ ಪ್ರಸಾದ
ಉಕಾರ ತಾನುರೆ ಸಿದ್ಧ ಪ್ರಸಾದವಹುದೈ
ಮಕಾರ ಶೇಷ ಪ್ರಸಿದ್ಧ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೪೨ ಅಕಾರ ಕ್ರಿಯಾ ಭಸಿತವು
ಉಕಾರವೆಂಬಾ ಪ್ರಣವ ಜ್ಞಾನದ ಭಸ್ಮಂ
ಮಕಾರ ಚಿದ್ಘನ ಭಸ್ಮಂ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೪೩. ಅಕಾರ ಕ್ರಿಯಾ ಶಿವಾಕ್ಷಿ
ಉಕಾರವೆಂಬಾ ಪ್ರಣವ ಜ್ಞಾನ ಶಿವಾಕ್ಷಂ
ಮಕಾರ ಚಿದ್ಘನ ಶಿವಾಕ್ಷಿ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೪೪. ಅಕಾರ ನಮವೆಂಬಕ್ಷರ
ಉಕಾರವೆಂಬಾ ಪ್ರಣವವದು ಶಿವಾಕ್ಷರವೈ
ಮಕಾರವು ಯಓಂಕಾರಂ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೪೫ ಅಕಾರವಷ್ಟಾವರಣಂ
ಉಕಾರವೆಂಬಾ ಪ್ರಣವಂ ಪಂಚಾಚಾರಂ
ಮಕಾರ 'ಮುಭಯದ' (ಷಟ್‌ಸ್ಥಲ) ಕೂಟಂ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೪೬. ಅಕಾರವಾದಿ ಪೀಠವು
ಉಕಾರವೆಂಬಾ ಪ್ರಣವ ಮೂರ್ಧ್ವ ಸು ಪೀಠಂ
ಮಕಾರ ಬೀಜವು ಗೋಮುಖ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೪೭. ಅಕಾರ ವೃತ್ತಂ ಕಟಿಯುದು
ಉಕಾರವೆಂಬುದೆ ವರ್ತುಳ ಗೋಮುಖವಕ್ಕುಂ
ಮಕಾರ ನಾಳ ಸು ಗೋಳಕ
ತ್ರಿಕೂಟವೆ ಮೂಲ ಮಂತ್ರಂ ಬಸವ ಪ್ರಭುವೇ

೨೪೮. ಅಕಾರ ಶಕ್ತಿಯು ಪೀಠಂ
ಉಕಾರವೆಂಬಾ ಪ್ರಣವಂ ತಾಂ ಶಿವಪೀಠಂ
ಮಕಾರ ಉಭಯುದ ಕೂಟಂ
ತ್ರಿಕೂಟವೆ 'ಮೂಲಮಂತ್ರಂ'(ಇಷ್ಟಲಿಂಗಂ) ಬಸವ ಪ್ರಭುವೇ

## ೪೫. ಇಷ್ಟಲಿಂಗದ ಲಕ್ಷಣ.

೨೪೯. ಲಿಂಗದಡಿ ಪೀಠ ಶ್ರೀ ಗುರು
ಲಿಂಗದ ಮೇಲೂರ್ಧ್ವ ಪೀಠ ಚಿದ್ಘನ ಲಿಂಗಂ
ಲಿಂಗದ ಗೋಮುಖ ಜಂಗಮ
ಲಿಂಗವೆ ಕೂಡಲ ಸಂಗಂ ಬಸವ ಪ್ರಭುವೇ

೨೫೦. ಲಿಂಗದಡಿ ಇಷ್ಟಲಿಂಗಂ
ಲಿಂಗದ ಮೇಲ್ಮುಡಿ ಪೀಠ ಪ್ರಾಣ ಸು ಲಿಂಗಂ
ಲಿಂಗದ ಗೋಮುಖ ಭಾವಂ
ಲಿಂಗವು ಕೂಡಲ ಸಂಗಂ ಬಸವ ಪ್ರಭುವೇ

೨೫೧. ಲಿಂಗದಡಿ ಪೀಠವೆ ಸ್ವಯ
ಲಿಂಗದ ಮೇಲ್ಮುಡಿಯು ಪೀಠ ಚರ ಜಂಗಮವೈ
ಲಿಂಗದ ಗೋಮುಖ ಪರ ಚರ
ಲಿಂಗವೆ ಕೂಡಲ ಸಂಗಂ ಬಸವ ಪ್ರಭುವೇ

೨೯೨. ಗುರು ಕರದಬ್ಜ ದೊಳಿರೊಗೆದಾ
ಶರಣಂಗೆ ಹರಣ ಕಿರಣ ಸ್ಮರಣೆಯಾದಾಗಲ್
ಕರಣೇಂದ್ರಿಯ ಗುಣವ ನಳಿವುದು
ಕರಪೀಠದಿಷ್ಟಲಿಂಗಂ ಬಸವ ಪ್ರಭುವೇ

೨೯೩. ಶರಣನ ಹೃನ್ಮಂದಿರದೊಳ್
ವರ ಚೌಕ ಮಧ್ಯವೆಂಬಾ ಮಣಿ ಮಂಚದೊಳಂ
ಶರಣ ಸತಿ ರತಿ ಯೊಳಿರ್ಪುದು
ಕರ ಪೀಠ ದಿಷ್ಟಲಿಂಗಂ ಬಸವ ಪ್ರಭುವೇ

೨೯೪. ಶರಣನ ಸರ್ವಾಂಗದೊಳಂ
ಬರಲುಳ್ಳ ವಿಷಯಗಳನು ತಾನನುಭವಿಸುತ್ತಂ
ಶರಣಂಗೆ ಹರಣವುಪ್ಪುದು
ಕರಪೀಠ ದಿಷ್ಟಲಿಂಗಂ ಬಸವ ಪ್ರಭುವೇ

## ೪೬ ಮೋಕ್ಷಪದವಿಗಳ ಆಶಾನಿರಸನ.

೨೯೫. ಹಾಲಿನ ಸಾಗರದೊಳಿರ್ದ
ಮೇಲಾ ಗೊಡ್ಡಾವ ಬಯಸಿ ಬಳಲುವ ಪರಿಯೋಲ್
ಕೈಲಿ ಸ್ವಯ ಲಿಂಗ ವಿರಲು
ಕೈಲಾಸದಿಚ್ಛೆ ಯಾದೇಕೆ ಬಸವ ಪ್ರಭುವೇ

೨೯೬. ಚಿನ್ನದ ಗಿರಿಯೊಳಗಿರ್ದುಂ
ಅನ್ಯರನು ಧನವ ಬೇಡುತ ಬಳಲುವ ಪರಿಯೋಲ್
ತನ್ನಿಷ್ಟಲಿಂಗ ವಿರುತಿರೆ
ಅನ್ಯ ಪದ ‘ವಿ’ (ದ) ಹಂಗದೇಕೆ ಬಸವ ಪ್ರಭುವೇ

೨೯೭ ಸರಮುತ್ತಿನ ಗುಂದಿಗಳಿರ್ದುಂ
ಕಿರಿ ಗಾಜಿನ ಮಣಿಯಬಯಸಿ ಬಳಲುವ ಪರಿಯೋಲ್
‘ಪರಮೇಷ್ಟ’(ಕರದಿಷ್ಟ) ಲಿಂಗ ವಿರುತಿರೆ
ಹರನ ಫಲ ಪದವಿಯದೇಕೆ ಬಸವ ಪ್ರಭುವೇ

---

೨೯೭. ಹರನ ಫಲ ಪದವಿ=ಕೈಲಾಸ

೧೯೮. ವೃಕ್ಷಾಟನ್ನದಡಿಗೆ ಯಾಗಿರೆ
ಮುಟ್ಟದೆ ತಂಗಳನು ಬಯಸಿ ಬಳಲುವ ಪರಿಯೋಲ್
ಇಷ್ಟವುಹಲಿಂಗ ವಿರುತಿರೆ
ಅಷ್ಟಕ ಸಿದ್ಧಿಗಳದೇಕೆ ಬಸವ ಪ್ರಭುವೇ

೧೯೯. ನಾಂ ನೀಂ ಉಭಯುವ ನಳಿಯಃತ
ತಾಂ ತಾನೆಯಾದ ಚಿದ್ಘನ ಶರಣರ ತಳಿಗಂ
ಜ್ಞಾನಾಮೃತಗರೆವ ಕಾಮ
ಧೇನುವೆ ಕರದಿಷ್ಟಲಿಂಗ ಬಸವ ಪ್ರಭುವೇ

೨೦೦. ಈ ಕ್ಷಿತಿ ಆ ಪರಲೋಕವ
ಪಕ್ಷ ಪರಪಕ್ಷ ವಿಲ್ಲದೆ ರಕ್ಷಿಸುತಿರ್ಪಾ
ಉಕ್ಷನ ಭಕ್ತಗೆ ಕಲ್ಪ ಸು
ವೃಕ್ಷವೆ ಕರದಿಷ್ಟಲಿಂಗ ಬಸವ ಪ್ರಭುವೇ

೨೦೧. ಅಣಿಮಾದಿ ಅಷ್ಟ ಸಿದ್ಧಿಯು
ತೃಣಕೆ ಕಡೆಯೆಂದು ಭೇದಿಸಿ ಗುರು ಚರ ಪದಕಂ
ಮಣಿಯುವ ಭಕ್ತಗೆ ಚಿಂತಾ
ಮಣಿಯೇ ಕರದಿಷ್ಟಲಿಂಗ ಬಸವ ಪ್ರಭುವೇ

## ೪೭. ಮುಗಿಸುವಿಕೆ.

೨೦೨. ಇಂತಪ್ಪ ಇಷ್ಟಲಿಂಗವ
ಮಂತ್ರದ ಪಣ್ಮೂರ್ತಿಯೆಂದು ಬೋಧಿಸಿ ಎನ್ನಾ
ಅಂತರ್ಬಾಹ್ಯದೊಳಿರಿಸಿದ
ಶಾಂತ ಶ್ರೀ ಗುರುವೆ ಪಾಹಿ ಬಸವ ಪ್ರಭುವೇ

೨೦೩. ಪಾಹಿ ಭವ ಭೂಜ ಕುಠಾರ
ಪಾಹಿ ಪರತತ್ವ ಬ್ರಹ್ಮ ಬೋಧ ಸು ಧೀರಾ
ಪಾಹಿ ಸಸುಜ್ಞಾನ ಸಾರ
ಪಾಹಿ ಗುರು ಚನ್ನವೀರಾ ಬಸವ ಪ್ರಭುವೇ

ಮುಗಿದುದು.